KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೧೭, ೨೦೦೯ (ಭಾದ್ರಪದ ೨೬, ಶಕ ವರ್ಷ ೧೯೩೧) | ಸಂಚಿಕೆ ೩೮ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಮಾಜಿ ದೇವದಾಸಿ ಮಹಿಳೆಯರಿಗೆ ವಸತಿ ಕಲ್ಪಿಸುವ ಹೊಸ ಯೋಜನೆಯನ್ನು ಜಾರಿಗೆ ತರುವ ಕುರಿತು.

**ಓದಲಾಗಿದೆ:** 1. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ, ಬೆಂಗಳೂರು ಇವರ ದಿನಾಂಕ: 08.04.2009 ರ ಪತ್ರ ಸಂಖ್ಯೆ:ಮಅನಿ:ದೇಪುಯೋ: 60:2008–09/22 ರೊಡನೆ ಕೊನೆಗೊಂಡ ಪ್ರಸ್ತಾವನೆ.

2. ದಿನಾಂಕ: 20.05.2009 ರ ಆರ್ಥಿಕ ಇಲಾಖೆಯ ಅಧಿಸೂಚನೆ ಸಂಖ್ಯೆ: ಆಇ:185:ವೆಚ್ಚ–12/2009.

**ಪ್ರಸ್ತಾವನೆ:**

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ಇವರ ಮೇಲೆ ಓದಲಾದ (1) ರ ಪ್ರಸ್ತಾವನೆಯಲ್ಲಿ, ದೇವದಾಸಿ ಪದ್ಧತಿಯು ಒಂದು ಸಾಮಾಜಿಕ ಅನಿಷ್ಠ ಪದ್ಧತಿಯಾಗಿದ್ದು, ಇದನ್ನು ರದ್ದುಪಡಿಸಲು ಕರ್ನಾಟಕ ದೇವದಾಸಿಯರ (ಸಮರ್ಪಣಾ ನಿಷೇಧ) ಅಧಿನಿಯಮ, 1982ನ್ನು ಜಾರಿಗೆ ತಂದಿದ್ದು, ಸುಮಾರು 22,873 ಮಾಜಿ ದೇವದಾಸಿ ಮಹಿಳೆಯರನ್ನು ಗುರುತಿಸಲಾಗಿರುತ್ತದೆ. ಮಾಜಿ ದೇವದಾಸಿಯರ ಜೀವನೋಪಾಯಕ್ಕಾಗಿ ಪುನರ್ವಸತಿ ಕಲ್ಪಿಸುವ ನಿಟ್ಟಿನಲ್ಲಿ ರಾಜ್ಯ ಸರ್ಕಾರವು ಕೆಲವೊಂದು ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಿರುತ್ತದೆ. ದೇವದಾಸಿ ಪುನರ್ವಸತಿ ಕಾರ್ಯಕ್ರಮದಡಿಯಲ್ಲಿ ವಿಮುಕ್ತ ದೇವದಾಸಿ ಮಹಿಳೆಯರು ಆದಾಯೋತ್ಪನ್ನ ಚಟುವಟಿಕೆಗಳನ್ನು ಕೈಗೆತ್ತಿಕೊಳ್ಳಲು ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದ ಮೂಲಕ ಶೇಕಡ 50 ರಷ್ಟು ಸಹಾಯಧನವನ್ನು ಹಾಗೂ ಬ್ಯಾಂಕುಗಳಿಂದ ಶೇಕಡ 50 ರಷ್ಟು ಸಾಲವನ್ನು ನೀಡಲಾಗುತ್ತಿರುತ್ತದೆ. ಈ ಅನಿಷ್ಠ ಪದ್ಧತಿಯನ್ನು ಸಂಪೂರ್ಣವಾಗಿ ತಡೆಗಟ್ಟಲು ಆಗಿಂದಾಗ್ಗೆ ಜಾಗೃತಿ ಶಿಬಿರ, ಆರೋಗ್ಯ ತಪಾಸಣಾ ಶಿಬಿರಗಳನ್ನು ಏರ್ಪಡಿಸುವುದಲ್ಲದೆ ಸ್ವಸಹಾಯ ಗುಂಪುಗಳ ರಚನೆ ಮತ್ತು ತರಬೇತಿ ನೀಡುವ ಕಾರ್ಯಕ್ರಮಗಳನ್ನು ಸಹ ಹಮ್ಮಿಕೊಳ್ಳಲಾಗಿರುತ್ತದೆ. 2007–08ನೇ ಸಾಲಿನಿಂದ 45 ವರ್ಷ ತುಂಬಿದ 11,993 ಹಾಗೂ 2008–09ನೇ ಸಾಲಿನಲ್ಲಿ 3,737 ಹೆಚ್ಚುವರಿ ದೇವದಾಸಿ ಮಹಿಳೆಯರಿಗೆ ಮಾಸಿಕ ರೂ.400/– ಮಾಶಾಸನವನ್ನು ನೀಡಲಾಗುತ್ತಿದೆ.

ದೇವದಾಸಿಯರಿಂದ ಆಗಿಂದಾಗ್ಗೆ ವಿವಿಧ ರೀತಿಯ ಬೇಡಿಕೆಗಳು ಬರುತ್ತಿದ್ದು, ಸುಮಾರು 11,892 ಮಾಜಿ ದೇವದಾಸಿಯರು ನಿವೇಶನ ಹೊಂದಿದ್ದು, ಜೀವನೋಪಾಯಕ್ಕಾಗಿ ಗೃಹ ನಿರ್ಮಾಣ ಮಾಡಿಸಿಕೊಡುವುದು ಸಹ ಒಳಗೊಂಡಿರುತ್ತದೆ. ಈಗಾಗಲೇ ವಸತಿ ಇಲಾಖೆಯ ವಿಶೇಷ ಯೋಜನೆಯಡಿ ಮಾಜಿ ದೇವದಾಸಿಯರನ್ನು ಒಳಗೊಂಡಂತೆ ವಿವಿಧ ವರ್ಗಗಳಿಗೆ ರಾಜೀವ್ ಗಾಂಧಿ ಗ್ರಾಮೀಣ ವಸತಿ ಅಭಿವೃದ್ಧಿ ನಿಗಮದ ಮೂಲಕ ವಸತಿಯನ್ನು ನಿರ್ಮಿಸಿಕೊಡಲಾಗುತ್ತಿದ್ದು, 4121 ಮಾಜಿ ದೇವದಾಸಿಯರು ಈ ಸೌಲಭ್ಯವನ್ನು ಈಗಾಗಲೇ ಪಡೆದಿದ್ದು, ಉಳಿದ 11,892

ಮಾಜಿ ದೇವದಾಸಿಯರಿಗೆ ವಸತಿಯನ್ನು ಕಲ್ಪಿಸಲು ಒತ್ತಾಯ ಮಾಡುತ್ತಿದ್ದಾರೆ ಮತ್ತು ಮಾಜಿ ದೇವದಾಸಿ ಮಹಿಳೆಯರಿಗೆ ಸೀಮಿತಗೊಂಡಂತೆ ಪ್ರತ್ಯೇಕ ಯೋಜನೆ ಇರುವುದಿಲ್ಲ.

ಡಾ:ನಂಜುಂಡಪ್ಪ ವರದಿಯಲ್ಲಿ ಈ ಕೆಳಗೆ ಸೂಚಿಸಿದ 10 ಜಿಲ್ಲೆಗಳನ್ನು ಹಿಂದುಳಿದ ಜಿಲ್ಲೆಗಳಾಗಿ ನಮೂದಿಸಿದ್ದು, ಸದರಿ ಜಿಲ್ಲೆಗಳಲ್ಲಿ ವಸತಿ ರಹಿತ ನಿವೇಶನ ಹೊಂದಿರುವ ಮಾಜಿ ದೇವದಾಸಿಯರಿರುತ್ತಾರೆ.

| ಕ್ರ. ಸಂ. | ಜಿಲ್ಲೆಯ ಹೆಸರು | ಸಮೀಕ್ಷೆಯಲ್ಲಿ ಗುರುತಿಸಲ್ಪಟ್ಟ ಮಾಜಿ ದೇವದಾಸಿಯರ ಸಂಖ್ಯೆ | ವಸತಿ ರಹಿತ ನಿವೇಶನ ಹೊಂದಿರುವವರ ಸಂಖ್ಯೆ | ಈಗಾಗಲೇ ವಸತಿ ಇಲಾಖೆಯ ವಿಶೇಷ ಯೋಜನೆಯಡಿ ಸೌಲಭ್ಯ ಪಡೆದಿರುವ ಸಂಖ್ಯೆ |
|---|---|---|---|---|
| 1 | ಬೆಳಗಾವಿ | 3,600 | 2,539 | 701 |
| 2 | ಬಿಜಾಪುರ | 1,964 | 750 | 750 |
| 3 | ಬಾಗಲಕೋಟೆ | 4,804 | 2,154 | 716 |
| 4 | ಬಳ್ಳಾರಿ | 1,635 | 312 | 707 |
| 5 | ಕೊಪ್ಪಳ | 4,880 | 1,515 | 00 |
| 6 | ರಾಯಚೂರು | 2,494 | 2,271 | 425 |
| 7 | ಗುಲ್ಬರ್ಗಾ | 991 | 724 | 108 |
| 8 | ಧಾರವಾಡ | 481 | 625 | 91 |
| 9 | ಹಾವೇರಿ | 617 | 116 | 626 |
| 10 | ಗದಗ್ | 1,407 | 886 | 00 |
| | | **22,873** | **11,892** | **4,124** |

ಮಾಜಿ ದೇವದಾಸಿಯರನ್ನು ಒಳಗೊಂಡಂತೆ ವಿವಿಧ ವರ್ಗಗಳಿಗೆ ರಾಜೀವ್ ಗಾಂಧಿ ಗ್ರಾಮೀಣ ವಸತಿ ಅಭಿವೃದ್ಧಿ ನಿಗಮದ ಮೂಲಕ ವಸತಿ ಕಲ್ಪಿಸುತ್ತಿದ್ದು, ಎಲ್ಲಾ ಮಾಜಿ ದೇವದಾಸಿಯರಿಗೆ ಈ ಸೌಲಭ್ಯವನ್ನು ಒದಗಿಸಲು ಅವಕಾಶವಿರುವುದಿಲ್ಲ. ಪರಿಶಿಷ್ಟ ಜಾತಿ /ವರ್ಗದವರಿಗೆ ವಿಶೇಷ ಯೋಜನೆಯಡಿ ರಾಜ್ಯ ಸರ್ಕಾರವು ವಿವಿಧ ರೀತಿಯ ಪುನರ್ವಸತಿ ಯೋಜನೆಯನ್ನು ಕಲ್ಪಿಸಿರುತ್ತದೆ. ಆದುದರಿಂದ ಪರಿಶಿಷ್ಟ ಜಾತಿ/ವರ್ಗಕ್ಕೆ ಸೇರಿದ ಮಾಜಿ ದೇವದಾಸಿ ಮಹಿಳೆಯರಿಗೆ ಸೀಮಿತಗೊಂಡಂತೆ ವಿಶೇಷ ಸೌಲಭ್ಯವನ್ನು ಒದಗಿಸಲು ಅವಕಾಶವಿರುತ್ತದೆ. ಪ್ರತಿ ವಸತಿಗೆ ಸುಮಾರು ರೂ.40,000/– ವೆಚ್ಚವಾಗಲಿದ್ದು, ಪ್ರಾರಂಭಿಕವಾಗಿ ಪ್ರತಿ ಜಿಲ್ಲೆಯಲ್ಲಿ 250 ವಸತಿಗಳಂತೆ 10 ಜಿಲ್ಲೆಗಳಲ್ಲಿ 2,500 ಮನೆಗಳನ್ನು ಒಟ್ಟು ರೂ.10.00 ಕೋಟಿ ವೆಚ್ಚದ ಅಂದಾಜಿನಲ್ಲಿ ರಾಜೀವ್ ಗಾಂಧಿ ಗ್ರಾಮೀಣ ವಸತಿ ಅಭಿವೃದ್ಧಿ ನಿಗಮದ ಮೂಲಕವೇ ನಿರ್ಮಿಸಿಕೊಡಲು ಉದ್ದೇಶಿಸಲಾಗಿದೆ.

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999 ರನ್ವಯ ರೂ.5.00 ಲಕ್ಷ ಮೌಲ್ಯಕ್ಕಿಂತ ಹೆಚ್ಚಿನ ನಿರ್ಮಾಣ ಕಾಮಗಾರಿಯನ್ನು ಟೆಂಡರ್ ಮೂಲಕವಲ್ಲದೆ ಸಂಗ್ರಹಣೆ ಮಾಡಲು ಅವಕಾಶವಿರುವುದಿಲ್ಲ, ಆದರೆ ಪ್ರಕರಣ 4(ಜಿ) ರನ್ವಯ ಸರ್ಕಾರವು ಯಾವುದೇ ವಿಶಿಷ್ಟ ಸಂಸ್ಥೆಗೆ ಅಧಿನಿಯಮದ ಉಪಬಂಧಗಳಿಂದ ವಿನಾಯಿತಿ ನೀಡಿದ್ದಲ್ಲಿ ಅಂತಹ ಸಂಸ್ಥೆಗೆ ನೇರವಾಗಿ ವಹಿಸಲು ಅವಕಾಶವಿರುತ್ತದೆ. ವಸತಿ ನಿರ್ಮಾಣಕ್ಕೆಂದು ರಚಿತವಾಗಿರುವ ರಾಜ್ಯ ಸರ್ಕಾರ ಸ್ವಾಮ್ಯದ ರಾಜೀವ್ ಗಾಂಧಿ ಗ್ರಾಮೀಣ ವಸತಿ ಅಭಿವೃದ್ಧಿ ನಿಗಮಕ್ಕೆ ಫಲಾನುಭವಿಗಳ ಮಾಲೀಕತ್ವ ಹೊಂದಿರುವ ಎಲ್ಲಾ ನಿವೇಶನಗಳಲ್ಲಿ ಏಕರೂಪ ವಿನ್ಯಾಸ ಆಶ್ರಯ ಯೋಜನೆಯ ಮಾದರಿ ಅಡಿಯಲ್ಲಿ ನಿರ್ಮಾಣ ಕಾರ್ಯವನ್ನು ವಹಿಸಲು ಸರ್ಕಾರವು ಉದ್ದೇಶಿಸಿರುತ್ತದೆ.

ಆರ್ಥಿಕ ಇಲಾಖೆಯ ಅಧಿಸೂಚನೆ ಸಂಖ್ಯೆ: ಆಇ 185 ವೆಚ್ಚ–12/09, ದಿನಾಂಕ: 20.05.2009ರಲ್ಲಿ ಡಾ: ನಂಜುಂಡಪ್ಪ ವರದಿಯಲ್ಲಿ ನಮೂದಿಸಿರುವ 10 ಜಿಲ್ಲೆಗಳಲ್ಲಿನ ಪ್ರತಿ ಜಿಲ್ಲೆಗೆ 250 ರಂತೆ 2500 ಮನೆಗಳನ್ನು ಪ್ರತಿ ಮನೆಗೆ ರೂ.40,000/– ದರದಲ್ಲಿ ಒಟ್ಟು ರೂ.10.00 ಕೋಟಿ ಅಂದಾಜಿನಲ್ಲಿ ಮಾಜಿ ದೇವದಾಸಿಯರಿಗೆ ನೇರವಾಗಿ ರಾಜೀವ್ ಗಾಂಧಿ ಗ್ರಾಮೀಣ ವಸತಿ ಅಭಿವೃದ್ಧಿ ನಿಗಮದ ಮೂಲಕ ನಿರ್ಮಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಸರ್ಕಾರವು 2009–10ನೇ ಸಾಲಿಗೆ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿ ಅಧಿಸೂಚನೆ ಹೊರಡಿಸಿದೆ.

ವಸತಿ ನಿರ್ಮಾಣದ ನಂತರ ಮಾಜಿ ದೇವದಾಸಿ ಮಹಿಳೆಯರು ಸದರಿ ಕಟ್ಟಡವನ್ನು ಬಾಡಿಗೆಗೆ ನೀಡದೆ ಅಥವಾ ಯಾವುದೇ ರೀತಿಯ ಪರಭಾರೆ ಮಾಡದೆ ಕಡ್ಡಾಯವಾಗಿ ವಸತಿಯಲ್ಲಿ ನೆಲಸಬೇಕೆಂಬ ಷರತ್ತಿನ ಮೇರೆಗೆ ಈ ಸೌಲಭ್ಯವನ್ನು ಒದಗಿಸಬಹುದಾಗಿರುತ್ತದೆ.

ಈ ಮೇಲೆ ಹೇಳಿದ ಹಿನ್ನೆಲೆಯಲ್ಲಿ ಡಾ:ನಂಜುಂಡಪ್ಪ ವರದಿಯಲ್ಲಿ ನಮೂದಿಸಿರುವ 10 ಜಿಲ್ಲೆಗಳಲ್ಲಿನ ಪ್ರತಿ ಜಿಲ್ಲೆಗೆ 250 ರಂತೆ 2,500 ಮನೆಗಳನ್ನು ಪ್ರತಿ ಮನೆಗೆ ರೂ.40,000/– ದರದಲ್ಲಿ ಒಟ್ಟು ರೂ.10.00 ಕೋಟಿ ವೆಚ್ಚ ಅಂದಾಜಿನಲ್ಲಿ ಮಾಜಿ ದೇವದಾಸಿ ಮಹಿಳೆಯರಿಗೆ ರಾಜೀವ್ ಗಾಂಧಿ ಗ್ರಾಮೀಣ ವಸತಿ ಅಭಿವೃದ್ಧಿ ನಿಗಮದ ಮೂಲಕ ಪ್ರಕರಣ 4(ಜಿ) ರನ್ವಯ ವಿನಾಯಿತಿ ನೀಡಿ ವಸತಿ ಕಲ್ಪಿಸುವ ಹೊಸ ವಿಶೇಷ ಯೋಜನೆಯನ್ನು 2009–10ನೇ ಸಾಲಿನಿಂದ ಅನುಷ್ಠಾನಗೊಳಿಸಲು ಸರ್ಕಾರವು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ 05 ಮಅನಿ 2009, ಬೆಂಗಳೂರು ದಿನಾಂಕ: 23ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಡಾ:ನಂಜುಂಡಪ್ಪ ವರದಿಯಲ್ಲಿ ನಮೂದಿಸಿರುವ 10 ಜಿಲ್ಲೆಗಳಲ್ಲಿನ ಪ್ರತಿ ಜಿಲ್ಲೆಗೆ 250 ರಂತೆ 2,500 ಮನೆಗಳನ್ನು ಪ್ರತಿ ಮನೆಗೆ ರೂ.40,000/– ಘಟಕ ವೆಚ್ಚದಲ್ಲಿ, ಒಟ್ಟು ರೂ.10.00 (ರೂಪಾಯಿ ಹತ್ತು ಕೋಟಿ ಮಾತ್ರ) ಕೋಟಿ ವೆಚ್ಚ ಅಂದಾಜಿನಲ್ಲಿ, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮವು ಮಾಜಿ ದೇವದಾಸಿ ಮಹಿಳೆಯರಿಗೆ, ರಾಜೀವ್ ಗಾಂಧಿ ಗ್ರಾಮೀಣ ವಸತಿ ಅಭಿವೃದ್ಧಿ ನಿಗಮದ ಮೂಲಕ ವಸತಿ ಕಲ್ಪಿಸುವ ಹೊಸ ವಿಶೇಷ ಯೋಜನೆಯನ್ನು 2009–10ನೇ ಸಾಲಿನಿಂದ ಅನುಷ್ಠಾನಗೊಳಿಸಲು ಆದೇಶಿಸಿದೆ.

ಮಾಜಿ ದೇವದಾಸಿಯರಿಗೆ ವಸತಿ ನಿರ್ಮಾಣಕ್ಕೆಂದು ರಚಿತವಾಗಿರುವ ರಾಜ್ಯ ಸರ್ಕಾರಿ ಸ್ವಾಮ್ಯದ ರಾಜೀವ್ ಗಾಂಧಿ ಗ್ರಾಮೀಣ ವಸತಿ ಅಭಿವೃದ್ಧಿ ನಿಗಮಕ್ಕೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999 ರ ಪ್ರಕರಣ 4(ಜಿ) ರನ್ವಯ ಎಲ್ಲಾ ನಿವೇಶನಗಳಲ್ಲಿ ಏಕರೂಪ ವಿನ್ಯಾಸದ ಆಶ್ರಯ ಯೋಜನೆಯ ಮಾದರಿಯಡಿಯಲ್ಲಿ ನಿರ್ಮಾಣ ಕಾರ್ಯವನ್ನು ವಹಿಸಲು ಸದರಿ ಸಂಸ್ಥೆಗೆ ಕೆ.ಟಿ.ಪಿ.ಪಿ. ಅಧಿನಿಯಮದಡಿ ಪ್ರಕರಣ 4(ಜಿ)ಯ ಅನ್ವಯ ವಿನಾಯಿತಿ ನೀಡಿದೆ ಹಾಗೂ ಅನುಬಂಧದಲ್ಲಿ ಲಗತ್ತಿಸಿರುವ ಷರತ್ತು ಮತ್ತು ನಿಬಂಧನೆಗಳು ನಿಗಧಿಪಡಿಸಿದ್ದು, ಕಟ್ಟುನಿಟ್ಟಾಗಿ ಪಾಲಿಸುವಂತೆ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮವು ಈ ಯೋಜನೆಯ ಬಗ್ಗೆ ಸೂಕ್ತ ಮಾಹಿತಿ ಕೇಂದ್ರ (Data base)ವನ್ನು ರಚಿಸುವುದು.

ಈ ಆದೇಶವನ್ನು ಯೋಜನಾ ಇಲಾಖೆ ಟಿಪ್ಪಣಿ ಸಂಖ್ಯೆ: ಪಿಡಿ 7 ಐಎಂಎಂ 2009, ದಿನಾಂಕ:13.02.2009 ಹಾಗೂ ಆರ್ಥಿಕ ಇಲಾಖೆ ಅಧಿಸೂಚನೆ ಸಂಖ್ಯೆ: ಆಇ 185 ವೆಚ್ಚ–12/2009 ದಿನಾಂಕ: 20.05.2009 ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ.
**ಆರ್. ನರಸಿಂಹಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ–2 (ಪ್ರ),
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

**ಸರ್ಕಾರಿ ಆದೇಶ ಸಂಖ್ಯೆ: ಮಮಇ 05 ಮಅನಿ 2009, ಬೆಂಗಳೂರು, ದಿನಾಂಕ: 23ನೇ ಜೂನ್ 2009,ಕ್ಕೆ**

**ಅನುಬಂಧ.**

**ಮಾಜಿ ದೇವದಾಸಿ ಮಹಿಳೆಯರಿಗೆ ವಸತಿ ಕಲ್ಪಿಸುವ ಯೋಜನೆಯನ್ನು ಅನುಷ್ಠಾನಗೊಳಿಸುವಲ್ಲಿ ಯೋಜನೆಯ ಷರತ್ತು ಮತ್ತು ನಿಬಂಧನೆಗಳು ಈ ಕೆಳಕಂಡಂತೆ ನಿಗಧಿಪಡಿಸಿದ್ದು ಅವುಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.**

**I. ವಸತಿ ಸೌಲಭ್ಯ ಪಡೆಯಲು ಅರ್ಹತೆ ಮತ್ತು ಸಲ್ಲಿಸಬೇಕಾದ ದಾಖಲಾತಿಗಳು:**

ಮಾಜಿ ದೇವದಾಸಿಯರಾಗಿರಬೇಕು. ಹಾಗೂ ಅವರ ಹೆಸರು ಸಮೀಕ್ಷೆಯ ಪಟ್ಟಿಯಲ್ಲಿರಬೇಕು.

1. ಮಾಜಿ ದೇವದಾಸಿಯು ಕರ್ನಾಟಕ ರಾಜ್ಯದ ಖಾಯಂ ವಾಸಿಯಾಗಿರಬೇಕು.
2. ಅರ್ಜಿದಾರರು 18 ವರ್ಷ ಮೇಲ್ಪಟ್ಟವರಾಗಿರಬೇಕು.
3. ಅರ್ಜಿದಾರರ ಕುಟುಂಬದ ವಾರ್ಷಿಕ ಆದಾಯ ರೂ.40,000/–ಗಳನ್ನು ಮೀರಿರಬಾರದು.
4. ಅರ್ಹ ಫಲಾನುಭವಿಯು ಸರ್ಕಾರದ ಬೇರೆ ಯಾವುದೇ ಯೋಜನೆ/ಇಲಾಖೆಯಿಂದ ಈಗಾಗಲೇ ವಸತಿ ಸೌಲಭ್ಯ ಪಡೆದಿರಬಾರದು.
5. ಅರ್ಜಿದಾರರು ನಿವೇಶನ ಹೊಂದಿರುವ ಗ್ರಾಮದಲ್ಲಿ ಕನಿಷ್ಠ 5 ವರ್ಷಗಳು ನೆಲೆಸಿರಬೇಕು.

**II. ಅರ್ಜಿಗಳನ್ನು ವಿತರಿಸುವ ಮತ್ತು ಸ್ವೀಕರಿಸುವ ವಿಧಾನ:**

1. ನಿಗಮದಿಂದ ಜಿಲ್ಲಾವಾರು ವಾರ್ಷಿಕ ಗುರಿ ನಿಗಧಿಪಡಿಸಿದ ನಂತರ ಜಿಲ್ಲಾ ಯೋಜನಾಧಿಕಾರಿಗಳು ಗುರಿಗನುಗುಣವಾಗಿ ಜಿಲ್ಲಾ ಮಟ್ಟದ ಸ್ಥಳೀಯ ಎರಡು ದಿನ ಪತ್ರಿಕೆಗಳಲ್ಲಿ ವ್ಯಾಪಕವಾಗಿ ಪ್ರಕಟಣೆ ನೀಡುವ ಮೂಲಕ ನಿವೇಶನ ಹೊಂದಿರುವ ಅರ್ಹ ಮಾಜಿ ದೇವದಾಸಿಯರಿಂದ ಅರ್ಜಿಗಳನ್ನು ಅಹ್ವಾನಿಸುವುದು.

ಅರ್ಜಿಯೊಂದಿಗೆ ಸಲ್ಲಿಸಬೇಕಾದ ದಾಖಲಾತಿಗಳನ್ನು ಹಾಗೂ ಅರ್ಜಿ ಸ್ವೀಕರಿಸುವ ಕಡೆಯ ದಿನಾಂಕವನ್ನು ಹಾಗೂ ಅರ್ಹತೆಗಳನ್ನು ಸ್ಪಷ್ಟವಾಗಿ ಪ್ರಕಟಣೆಯಲ್ಲಿ ತಿಳಿಸಿರತಕ್ಕದ್ದು.

2. ನಿಗದಿತ ದಿನಾಂಕದವರೆಗೆ ನಮೂನೆ –1 ರ ಅರ್ಜಿಗಳನ್ನು ವಿತರಿಸುವುದು.
3. ಬಂದಂತಹ ಅರ್ಜಿಗಳನ್ನು ಜಿಲ್ಲಾ ಯೋಜನಾ ಕಛೇರಿಗಳಲ್ಲಿ ನಿಗದಿಪಡಿಸಿದ ಅರ್ಜಿ ಸ್ವೀಕೃತಿ ವಹಿಯಲ್ಲಿ ಕಡ್ಡಾಯವಾಗಿ ಅರ್ಜಿಗಳನ್ನು ನೊಂದಾಯಿಸಬೇಕು.

**III. ಅರ್ಜಿಗಳ ಪರಿಶೀಲನೆ:**

ಸ್ವೀಕೃತವಾದ ಅರ್ಜಿಗಳನ್ನು ಯೋಜನಾಧಿಕಾರಿಗಳು ಕೆಳಕಂಡ ಅಗತ್ಯ ದಾಖಲೆಗಳನ್ನು ಸಲ್ಲಿಸಿರುವುದನ್ನು ಖಚಿತಪಡಿಸಿಗೊಂಡು ಪ್ರಾಥಮಿಕ ಪರಿಶೀಲನೆ ಮಾಡಿ ಅರ್ಹ ಅಭ್ಯರ್ಥಿಗಳ ಪಟ್ಟಿಯನ್ನು ತಯಾರಿಸಿ ಆಯ್ಕೆ ಸಮಿತಿ ಸಭೆಯನ್ನು ನಡೆಸಲು ಕ್ರಮಕೈಗೊಂಡು ಜಿಲ್ಲಾ ಆಯ್ಕೆ ಸಮಿತಿಯಲ್ಲಿ ಮಂಡಿಸಿ ಅನುಮೋದನೆಯನ್ನು ಪಡೆಯುವುದು. ಜಿಲ್ಲಾ ಆಯ್ಕೆ ಸಮಿತಿಯಲ್ಲಿ ಅನುಮೋದನೆಗೊಂಡ ಅರ್ಜಿಗಳ ವಿವರಗಳೂಂದಿಗೆ ಪಟ್ಟಿಯನ್ನು ಹಾಗೂ ಸಮಿತಿ ನಡೆವಳಿಗಳೂಂದಿಗೆ ಮಂಜೂರಾತಿಗಾಗಿ ನಿಗಮದ ಕೇಂದ್ರ ಕಛೇರಿಗೆ ಒಂದು ಭಾವ ಚಿತ್ರದೊಂದಿಗೆ ಸಲ್ಲಿಸುವುದು.

**ಅರ್ಜಿಯೊಂದಿಗೆ ಸಲ್ಲಿಸಬೇಕಾದ ಅಗತ್ಯ ದಾಖಲಾತಿಗಳು:**

1) ಜಾತಿ ಪ್ರಮಾಣ ಪತ್ರ.
2) ಕುಟುಂಬದ ವಾರ್ಷಿಕ ಆದಾಯ ಪ್ರಮಾಣ ಪತ್ರ.
3) ಮತದಾರರ ಗುರುತಿನ ಚೀಟಿ
4) ಭಾವ ಚಿತ್ರ–2
5) ನಿವೇಶನದ ಖಾತೆ

**IV. ಯೋಜನಾಧಿಕಾರಿಗಳ ಇತರೆ ಕರ್ತವ್ಯಗಳು:**

1) ಯೋಜನಾಧಿಕಾರಿಗಳು ಸ್ವೀಕರಿಸಿದ ಅರ್ಜಿಗಳನ್ನು ಅರ್ಹತೆ ಪೂರೈಸಿರುವ ಬಗ್ಗೆ ಸ್ವೀಕೃತ ವಹಿಯಲ್ಲಿ ನಮೂದಿಸುವುದು.
2) ಅರ್ಹ ಅಭ್ಯರ್ಥಿಗಳ ಪಟ್ಟಿ ತಯಾರಿಸುವುದು.
3) ಆಯ್ಕೆ ಸಮಿತಿ ಸಭೆಯನ್ನು ನಡೆಸಲು ಕ್ರಮಕೈಗೊಳ್ಳುವುದು.
4) ಪಟ್ಟಿಯನ್ನು ಜಿಲ್ಲಾ ಸಮಿತಿಗೆ ಮಂಡಿಸಿ ಅನುಮೋದನೆ ಪಡೆಯುವುದು.
5) ವಸತಿಗಳ ನಕ್ಷೆಯನ್ನು ಗ್ರಾಮ ಪಂಚಾಯಿತಿ/ತಾಲ್ಲೂಕು ಪಂಚಾಯಿತಿಯಿಂದ ಅನುಮೋದನೆ ಮಾಡಿಸಿ ಸಲ್ಲಿಸುವುದು. ವಸತಿಗಳ ನಕ್ಷೆಯನ್ನು ಗ್ರಾಮ ಪಂಚಾಯಿತಿ /ತಾಲ್ಲೂಕು ಪಂಚಾಯಿತಿಯಿಂದ ಅನುಮೋದನೆ ಮಾಡಿಸಿ ಸಲ್ಲಿಸುವುದು.
6) ಸದರಿ ಯೋಜನೆಯ ಬಗ್ಗೆ ನಿಗದಿತ ದಾಖಲೆಗಳನ್ನು ನಿರ್ವಹಿಸುವುದು.
7) ಜಿಲ್ಲೆಯಲ್ಲಿನ ಯೋಜನಾ ಅನುಷ್ಠಾನದ ಪೂರ್ಣ ಜವಾಬ್ದಾರಿ ಯೋಜನಾಧಿಕಾರಿಗಳದ್ದಾಗಿರುತ್ತದೆ.
8) ಪ್ರತಿ ತಿಂಗಳು ನಿಗದಿತ ನಮೂನೆಯಲ್ಲಿ ನಿಗಮಕ್ಕೆ ವರದಿ ಸಲ್ಲಿಸುವುದು.
9) ಮನೆಗಳ ಹಂತ,ಹಂತಗಳ ವಿವರಗಳನ್ನು ಪ್ರತಿ ಮಾಹೆ ವರದಿ ಸಲ್ಲಿಸುವುದು.
10) ಪೂರ್ಣಗೊಂಡ ಮನೆಗಳ ಹಸ್ತಾಂತರವನ್ನು ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳು ಹಾಗೂ ಉಪನಿರ್ದೇಶಕರು ಸಹಿಯೊಂದಿಗೆ ನಿಗದಿತ ನಮೂನೆಯಲ್ಲಿ ಫಲಾನುಭವಿಗಳಿಗೆ ನೀಡಲು ಕ್ರಮವಹಿಸುವುದು.

**V. ಫಲಾನುಭವಿಗಳ ಆಯ್ಕೆಗೆ ರಚಿಸಲಾದ ಜಿಲ್ಲಾ ಆಯ್ಕೆ ಸಮಿತಿಯ ಸದಸ್ಯರು:**

ಫಲಾನುಭವಿಗಳ ಆಯ್ಕೆಗೆ ಈ ಕೆಳಕಂಡ ಸದಸ್ಯರನ್ನೊಳಗೊಂಡ ಜಿಲ್ಲಾ ಸಮಿತಿ ಇರತಕ್ಕದ್ದು.

1. ಜಿಲ್ಲಾಧಿಕಾರಿಗಳು – ಅಧ್ಯಕ್ಷರು.
2. ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, – ಸದಸ್ಯರು.
3. ಜಿಲ್ಲಾ ಮಟ್ಟದ ಸಮಾಜ ಕಲ್ಯಾಣಾಧಿಕಾರಿಗಳು – ಸದಸ್ಯರು.
4. ದೇವದಾಸಿ ಪುನರ್ ವಸತಿ ಯೋಜನಾಧಿಕಾರಿಗಳು/ಅಭಿವೃದ್ಧಿ ನಿರೀಕ್ಷಕರು, ಮಹಿಳಾ ಅಭಿವೃದ್ಧಿ ನಿಗಮ. – ಸದಸ್ಯ ಕಾರ್ಯದರ್ಶಿಗಳು

**VI. ಜಿಲ್ಲಾ ಆಯ್ಕೆ ಸಮಿತಿಯ ಕರ್ತವ್ಯಗಳು:**

1) ಸಭೆ ಸೇರಿ ಜಿಲ್ಲಾ ಯೋಜನಾಧಿಕಾರಿಗಳು ಸಲ್ಲಿಸುವ ಪಟ್ಟಿಯನ್ನು ಅರ್ಜಿಗಳೂಂದಿಗೆ ಪರಿಶೀಲಿಸಿ ಫಲಾನುಭವಿಗಳನ್ನು ಅಂತಿಮವಾಗಿ ಆಯ್ಕೆಮಾಡುವುದು.
2) ನಿಗಮಕ್ಕೆ ಅಂತಿಮ ಆಯ್ಕೆ ಪಟ್ಟಿಯನ್ನು ಸಭಾ ನಡೆವಳಿಗಳೂಂದಿಗೆ ಸಲ್ಲಿಸುವುದು.

**VII. ಆಯ್ಕೆ ಮಾಡುವಾಗ ಸಮಿತಿಯು ಪರಿಗಣಿಸಬೇಕಾದ ಅಂಶಗಳು:**

1) ನಿರ್ಗತಿಕರಿಗೆ, ಹೆಚ್ಚಿನ ವಯಸ್ಸಾದವರಿಗೆ, ಅಂಗವಿಕಲರಿಗೆ ಆದ್ಯತೆ ನೀಡುವುದು.
2) ಕಡಿಮೆ ಆದಾಯ ಇರುವವರಿಗೆ ಆದ್ಯತೆ ನೀಡುವುದು.
3) ಹೆಚ್ಚಿನ ಅವಧಿ ಗ್ರಾಮದಲ್ಲಿ ವಾಸಿಸಿರುವವರಿಗೆ ಆದ್ಯತೆ ನೀಡುವುದು.
4) ಒಂದು ಗ್ರಾಮದಲ್ಲಿ ಕಡಿಮೆ ಸಂಖ್ಯೆಯಲ್ಲಿ ಅರ್ಹ ಫಲಾನುಭವಿಗಳಿದ್ದಲ್ಲಿ ಎಲ್ಲರನ್ನೂ ಆಯ್ಕೆ ಮಾಡುವುದು.

**VIII. ನಿಗಮದ ಕರ್ತವ್ಯಗಳು:**

1) ಜಿಲ್ಲಾವಾರು, ತಾಲ್ಲೂಕುವಾರು ಗುರಿ ನಿಗಧಿಪಡಿಸುವುದು.
2) ಮನೆಗಳನ್ನು ನಿರ್ಮಿಸಲು ಸಂಸ್ಥೆಗಳನ್ನು (Agency) ಅಯ್ಕೆಮಾಡುವುದು.
3) ಹಂತ ಹಂತವಾರು ಅನುದಾನ ಬಿಡುಗಡೆಮಾಡುವುದು.
4) ನಿಯತಕಾಲಿಕವಾಗಿ ಪರಾಮರ್ಶಿಸುವುದು.
5) ರಿಜಿಸ್ಟರ್‌ನಲ್ಲಿ ಭಾವ ಚಿತ್ರದೊಂದಿಗೆ ವಿವರಗಳನ್ನು ನಮೂದಿಸುವುದು.

**IX. ನಿಭಂದನೆಗಳು:**

1) ಒಂದು ಮನೆ ನಿರ್ಮಿಸಲು ಸರ್ಕಾರದಿಂದ ರೂ.40000/– ಮಾತ್ರ ನೀಡಲಾಗುವುದು.
2) ಸರ್ಕಾರ ಮಂಜೂರು ಮಾಡುವ ಪೂರ್ತ ಹಣವು ಅನುದಾನವಾಗಿರುತ್ತದೆ.
3) ವಸತಿಯನ್ನು 20x15 ಅಳತೆಯಲ್ಲಿ ನಿರ್ಮಿಸಲಾಗುವುದು.
4) ವಸತಿ ಗೃಹವನ್ನು ನಿಗದಿತ ನಕ್ಷೆಯಂತೆ ನಿರ್ಮಿಸಲಾಗುವುದು.
5) ಮಂಜೂರಾದ ಮೊತ್ತವನ್ನು ಮೂರು ಹಂತಗಳಲ್ಲಿ ಬಿಡುಗಡೆಮಾಡಲಾಗುವುದು.
6) ಮೊದಲನೇ ಹಂತದಲ್ಲಿ ಪಾಯಕ್ಕಾಗಿ, ಮಂಜೂರಾದ ಮೊತ್ತದಲ್ಲಿ ರೂ.10000/– ಗಳನ್ನು 2ನೇ ಹಂತದಲ್ಲಿ ಅಂದರೆ ಗೋಡೆ ಪ್ರಾರಂಭಿಸಿದ ನಂತರ ರೂ.10,000/– ಗಳನ್ನು, 3ನೇ ಹಂತದಲ್ಲಿ ಅಂದರೆ ಪ್ಲಾಸ್ಟಿಂಗ್ ನಡೆಯುವಾಗ ರೂ.10,000/– ಗಳನ್ನು ಮನೆ ಎಲ್ಲಾ ರೀತಿಯಲ್ಲಿ ಪೂರ್ತಿಯಾದ ನಂತರ ಬಾಕಿ ಉಳಿದಿರುವ ಹಣ ರೂ.10,000/– ಗಳನ್ನು ಬಿಡುಗಡೆ ಮಾಡಲಾಗುವುದು.
7) ಈ ಯೋಜನೆಯಡಿ ವಸತಿ ನಿರ್ಮಾಣವನ್ನು ನಿರ್ಮಿತಿ ಕೇಂದ್ರದ/ಗುತ್ತಿಗೆದಾರರ ಮುಖಾಂತರ ನಿರ್ಮಿಸುವುದಾದರು ಸಹ ಯೋಜನಾಧಿಕಾರಿಗಳು ಪೂರ್ಣ ಜವಾಬ್ದಾರರಾಗಿದ್ದು ಮೇಲುಸ್ತುವಾರಿ ಅಧಿಕಾರಿಗಳಾಗಿರುತ್ತಾರೆ.
8) ನಿಗಮದ "ಲೋಗೊವು" ಪ್ರತಿ ಮನೆಯ ಮುಂದಿನ ಗೋಡೆಯಲ್ಲಿರತಕ್ಕದ್ದು ವಸತಿಯನ್ನು ಯಾವುದೇ ಕಾರಣಕ್ಕೂ ಪರಭಾರೆ ಮಾಡತಕ್ಕದಲ್ಲ, ಆಕಸ್ಮಿಕವಾಗಿ ಪರಭಾರೆ ಮಾಡಿದ್ದಲ್ಲಿ ಅದು ಕಾನೂನು ಬದ್ಧವಾಗಿರುವುದಿಲ್ಲ.

**ಅನುಸರಣೆ: (Follow up)**

ವಸತಿ ಪೂರ್ಣಗೊಳಿಸಿದ ನಂತರ ಜಿಲ್ಲಾ ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ/ಯೋಜನಾಧಿಕಾರಿಗಳು, ದೇವದಾಸಿ ಪುನರ್ ವಸತಿ ಯೋಜನೆರವರು ಭೇಟಿ ನೀಡಿ ಪೂರ್ಣಗೊಂಡಿರುವ ಬಗ್ಗೆ ಪ್ರಮಾಣ ಪತ್ರವನ್ನು ನಿಗಮಕ್ಕೆ ಸಲ್ಲಿಸುವುದು.

**ಆರ್. ನರಸಿಂಹಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ-2 (ಪ್ರ),
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

ಪಿ.ಆರ್. 1420

## HORTICULTURE SECRETARIAT

**Sub:** "Scheme for Integrated Farming in Coconut for Productivity/ Improvement with Coconut Development Board Assistance (100% CDB)" – State Level Administrative Approval for the year 2009-10- reg.

**Read:** 1) GO. No. AHD 145 HPP 2007, dated 25.04.2008.
2) G.O No. ಕೃತೋಇ 44 ತೋಯೋಕಾ 2009 dated 6.4.2009.
3) Letter of CDB F.No.233/2009 –Dev/219 dated 23.4.2009
4) Letter of CDB No.ROB/13011/Dev-Kar/Sch/09-10 dated 14.5.2009
5) Letter of Director of Horticulture No.DH/PC/AHO-2/1/2009-10 dated 15.6.2009.

**Preamble:**

1. Coconut Development Board has conveyed the approval of the Board vide its letter read at (3) above for an amount of Rs.720.514 lakhs for implementing various schemes in Karnataka State during

2009-10 of which the share of the Coconut Development Board is Rs.717.389 lakhs. The balance has to be provided by the State Government to the tune of Rs.3.125 lakhs as matching contribution. Coconut Development Board has informed that funds for the year 2009-10 will be released by the Board in accordance with the prescribed pattern, on receipt of State Level Administrative Approval and Utilization Certificate in respect of continuing schemes implemented during 2008-09.

2. Coconut Development Board has further clarified that the component of organic manure units numbering 350 under Integrated Farming in Coconut Holdings for Productivity Improvement at a cost of Rs.70.00 lakhs is to be implemented by the Department of Horticulture, Government of Karnataka and not directly by the Board vide its letter read at (4) above.

3. Thus, components to the tune of Rs.329.264 lakhs will have to be implemented directly by the Coconut Development Board and components to the tune of Rs.391.25 lakhs will have to be implemented by the Department of Horticulture, Government of Karnataka. Out of Rs.391.25 lakhs the State share will be Rs.3.125 lakhs and Coconut Development Board share will be Rs.388.125 lakhs.

4. During 2009-10 under the State Budget the following allocations has been made.

(1) As per the Detailed Estimate of Expenditure Volume-VI of 2009-10 at page 13, an amount of Rs. 300.00 lakhs (State Plan) and;

(2) As per the Budget Allotment for Zilla Panchayath Plan and Non-plan for the year 2009-10 at page 88, an amount of Rs. 20.36 lakhs (District Plan).

Thus, a total amount of Rs.320.36 lakhs has been provided at the State Budget as against a requirement of Rs.391.25 lakhs.

5. The said scheme has been transferred from District Plan to State Plan during 11$^{th}$ plan period as per Government Order read at (1) above. The State share of Rs.3.125 lakhs towards production and distribution of planting material for propagation of 25,000 hybrid coconut seedlings at K.R.S farm, Mandya will be met under the State Plan scheme namely, “Development and Maintenance of Farms and Nurseries” Head of Account 2401-00-119-4-05-139 (Major Works). Thus, the amount of Rs.20.36 lakhs provided under District Plan is to be treated as surrendered and Rs.388.264 lakhs is to be provided under State Plan “Scheme for Integrated Farming in Coconut for Productivity/ Improvement with Coconut Development Board Assistance (100% CDB)” Head of Account 2401-00-108-2-35-100 (Financial Assistance/ Relief).

6. The “Scheme for Integrated Farming in Coconut for Productivity/ Improvement with Coconut Development Board Assistance (100% CDB)” Head of Account 2401-00-108-2-35-100 (Financial Assistance/ Relief) has been continued during 2009-10 as an ongoing basis as per Government Order read at (2) above with a condition that the scheme will be implemented limiting to the budget provided during 2009-10 and as per the guidelines provided by the Coconut Development Board.

7. The Deputy Director, Coconut Development Board, Regional Office Cum Training Center, Bangalore met the Secretary, Horticulture and informed that Coconut Development Board is awaiting the State Level Administrative Approval for release of grants to the State Government. The Director of Horticulture in its letter read at (5) above has requested the Government to provide State Level Administrative Approval for Rs.632.294 lakhs of which components to the tune of Rs.329.264 lakhs will be implemented directly by the Coconut Development Board and components to the tune of Rs.303.03 lakhs will be implemented by the Department of Horticulture, Government of Karnataka.

8. The proposal of the Director of Horticulture has been examined and hence this order;

**Government Order No.AHD 53 HPP 2009, Bangalore, Dated: 24$^{th}$ June 2009**

Government is pleased to accord State Level Administrative Approval for implementing the Coconut Development Programmes during the year 2009-10 with a total financial outlay of Rs. 632.294 lakhs of which components to the tune of Rs.303.03 lakhs will be implemented by the Department of

Horticulture and components to the tune of Rs.329.264 lakhs will be implemented by the Coconut Development Board directly. Component wise details are given below:-

**Programmes for the year 2009-10**

(Rs.in lakhs)

| Sl. No | Name of the scheme | Department of Horticulture (Target) | | | |
|---|---|---|---|---|---|
| | | Phy. | Fin. | | |
| | | | State share | CDB share | Total |
| | **STATE** | | | | |
| 1 | **Production and Distribution of Planting Materials** | | | | |
| | Production and Distribution of TXD hybrids and other released varieties (50:50 basis) | 25,000 Nos | 3.125 | 3.125 | 6.25 |
| 2 | **Integrated farming in Coconut holdings for Productivity Improvement** | | | | |
| | 1. Laying out demonstration plots (New) | 1000 ha | | 175.00 | 175.00 |
| | 2. Laying out demonstration plots (Old) | 296 ha | | 51.78 | 51.78 |
| | 3. Organic Manure Unit | 350 Nos | | 70.00 | 70.00 |
| | **TOTAL** | | **3.125** | **299.905** | **303.03** |
| | **COCONUT DEVELOPMENT BOARD** | | | | |
| 1 | Aid to Private nurseries and seed gardens | | | | |
| | 1) Seed garden (Big unit) | 2 Nos | | 9.00 | 9.00 |
| | 2) Nursery (Small unit) | 5 Nos | | 6.00 | 6.00 |
| 2 | Expansion of area under coconut | 200 ha | | 19.00 | 19.00 |
| 3 | Integrated Farming in Coconut Holding for Productivity Improvement-laying out of Demonstration plots | 1000 ha | | 295.264 | 295.264 |
| | **COCONUT DEVELOPMENT BOARD TOTAL** | | | **329.264** | **329.264** |
| | **GRAND TOTAL** | | **3.125** | **629.169** | **632.294** |

2. The State share of Rs.3.125 lakhs towards production and distribution of planting material for propagation of 25,000 hybrid coconut seedlings at K.R.S farm, Mandya will be met under the State Plan scheme namely, "Development and Maintenance of Farms and Nurseries" Head of Account 2401-00-119-4-05-139 (Major Works).

3. The Coconut Development Board share of Rs.299.905 lakhs will be met under the State Plan scheme namely, "Scheme for Integrated Farming in Coconut for Productivity/ Improvement with Coconut Development Board Assistance (100% CDB)" Head of Account 2401-00-108-2-35-100 (Financial Assistance/ Relief).

4. All efforts shall be made by the Director of Horticulture to ensure that the physical and financial targets fixed are achieved completely during 2009-10. The monthly progress report of the schemes to be implemented by the Department of Horticulture indicating the physical and financial achievements shall be furnished to the Coconut Development Board by the 10th of every month with a copy to the Government in MPIC format.

5. The Director of Horticulture shall ensure the following: -

a) In the case of production of TXD hybrid seedlings the details of male and female parent sources should be clearly indicated. The receipts accrued from the sale of seedlings under the TXD schemes may also be intimated to Coconut Development Board without fail. These receipts are to be shared by the Board and the State Governments on 50:50 basis.

b) Under the Area Expansion Programme, the source of planting materials shall be from the Nurseries of State Govt./CDB/CPCRI/CDB assisted Private Nurseries/ SAUs.

c) The basic yield data prior to the adoption of improved packages should be recorded from the plots identified for demonstration purpose.

d) The schemes ‘Laying out demonstration plots’ & ‘Establishment of organic manure units’ will be implemented as per the approved pattern. Under the scheme ‘Laying out demonstration plots’ financial assistance is limited to Rs.35,000/- per hectare depending on the activities under taken in the gardens in two annual installments. Necessary instructions shall be issued to the District Level Implementing Officers to initiate action to implement the Integrated Farming Scheme on a cluster basis. While selecting the cluster, preference should be given for areas with high incidence of pests and diseases. Modalities/ Criteria to be followed for implementation of the integrated farming scheme on cluster basis are as below:-

- A compact area approach with an extent of 25 ha. shall be selected by implementation of integrated farming scheme. All the small and marginal farmers coming under the cluster should be considered as beneficiaries of the programme based on the suitability of their coconut gardens irrespective of size of land holding.
- Conduct base line survey to record the present status of the crop and status of farmers before implementation of the projects. Data should be analyzed, and properly documented.
- Preference should be given to groups, which are promoted or supported by NGO/ Community based organizations/ Co-op societies etc.
- Cluster should have a technical resource group for monitoring and implementation of the different components of the programme. This resource group should visit different areas in the cluster in fixed days in a month. The resource groups should consist of the field level functionaries of the Horticulture Department, the Agricultural University, Coconut Development Board officials and scientists from Research Stations.
- A farmer leader should be identified for each group in the project area and the leader should be trained on all technologies to be adopted in the project area.
- The possibility of promoting farm level processing in the project area is to be ascertained and economically desirable coconut products are to be promoted through the groups.
- The technical programme and the calendar of operations for the year 2008-09 shall be prepared and distributed to the beneficiaries immediately for making arrangements for supply of inputs and timely adoption of the management practices.
- Supply of quality coconut seedlings is to be ensured in the selected clusters for new planting/ under planting. Their groups shall be promoted for production of quality seedlings by procuring seed nuts from the disease tolerant mother palm available in the project area. The mother palms selected in the root wilt affected areas shall be subjected to serological test at CPCRI as far as possible.

e) Under the scheme Organic Manure Unit, financial assistance is extended to popularize the use of Organic Manure in coconut holdings. Financial assistance is extended at the rate of Rs.20,000/- limited to 50% of the fixed and maintenance cost (size=15m X 1.5m X 0.70m). However, smaller units may be promoted and financial assistance may be reduced accordingly.

6. Releases will be made as and when Coconut Development Board provides funds.

7. The Director of Horticulture shall give wide publicity to the technology mission on coconut and identify, formulate and forward suitable projects to be proposed to Coconut Development Board as per the guidelines under the Technology Mission on Coconut.

8. The Director of Horticulture shall submit suitable proposals to the Government for additionality required under the scheme towards spillover works and as per the action plan approved by Coconut Development Board. Further, he shall send a separate proposal surrendering funds allocated under District Plan.

9. This order issues with the concurrence of Internal Financial Advisor, Agriculture and Horticulture Department vide Note No: ಕೃತೋಇ 150 ಆಂಆಸ 2009 dated 22.6.2009.

By order and in the name of Governor of Karnataka

**S. RAJU**

P.R. 1663 Under Secretary to Government, Horticulture Department

**COMMERCE AND INDUSTRIES SECRETARIAT**

**Sub:** Placing Services of Shri I.S.N.Prasad, IAS, Chief Project Officer, Karnataka State Highways Improvement Project and Managing Director, Karnataka Road Development Corporation Ltd, on additional charge as Project Coordinator of Mangalore SEZ Project and as one of the Directors on the Board of Directors of Mangalore Special Economic Zone Limited.

**Read:** 1. Chairman & Managing Director, Oil and Natural Gas Corporation Ltd., D.O. letter dated 10.7.2009 addressed to Chief Secretary Government of Karnataka.

2. U.O. Note No. CI DPAR 331 S.A.S 2009 dated 20.07.2009.

**Preamble:**

The Chairman and Managing Director, Oil and Natural Gas Corporation Limited in his letter read at (1) above has requested for designating Shri I.S.N.Prasad, IAS, as Project Coordinator of Mangalore SEZ Project and to nominate him as a Director on the Board of Mangalore SEZ Limited. The DPAR (Services) has concurred for the said request vide its U.O. Note read at (2) above. Hence the following order:-

**Government Order No. CI 180 SPI 2009, Bangalore, Dated: 21st July 2009**

In the circumstances explained in the preamble, the Government is pleased to designate Shri I.S.N.Prasad, IAS., Chief Project Officer, Karnataka State Highways Improvement Project and Managing Director, Karnataka Road Development Corporation Limited, as Project Coordinator of Mangalore SEZ Project as an additional charge and is also nominated as Director on the Board of Mangalore SEZ Limited, till further orders.

As Project Coordinator of Mangalore SEZ Project, Shri I.S.N.Prasad, IAS will be handling issues relating to land acquisition, Rehabilitation and Resettlement of Project Displaced Families, various matters pertaining to the Government of Karnataka in terms of SEZ Policy and regarding converting Mangalore SEZ from its present status of Sector Specific SEZ to General Purpose Multi-Product SEZ.

By order and in the name of the Governor of Karnataka

P.R. 1752 **APARNA PAVATE**

Desk Officer (Technical Cell), Commerce & Industries Department.

**ಕಂದಾಯ ಸಚಿವಾಲಯ**

**ವಿಷಯ:** 2009–10ನೇ ಸಾಲಿನಲ್ಲಿ ಭಾರಿ ಮಳೆ ಹಾಗೂ ಪ್ರವಾಹದ ವಿಕೋಪಗಳಿಗೆ ತುರ್ತು ಪರಿಹಾರ ಕ್ರಮ ಕೈಗೊಳ್ಳಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಜಿಲ್ಲಾಧಿಕಾರಿಗಳಿಂದ ಬಂದಿರುವ ಬೇಡಿಕೆ ಪತ್ರಗಳು.

**ಪ್ರಸ್ತಾವನೆ:**

2009ನೇ ಜುಲೈ ತಿಂಗಳಲ್ಲಿ ಬಿದ್ದ ಭಾರಿ ಮಳೆಯಿಂದ ಪ್ರವಾಹ ಪರಿಸ್ಥಿತಿ ಉಂಟಾಗಿ ಮಾನವ ಜೀವಹಾನಿ, ಜಾನುವಾರುಹಾನಿ, ಮನೆಹಾನಿ, ಬೆಳೆಹಾನಿ ಹಾಗೂ ಮೂಲಭೂತ ಸೌಕರ್ಯಗಳಿಗೆ ಹಾನಿ ಉಂಟಾಗಿದೆ. ಇಂತಹ ಹಾನಿಗೆ ತುರ್ತು ಪರಿಹಾರ ಕೈಗೊಳ್ಳಲು ಹಣ ಬಿಡುಗಡೆ ಮಾಡುವಂತೆ ಜಿಲ್ಲಾಧಿಕಾರಿಗಳು ಕೋರಿರುತ್ತಾರೆ. ಜಿಲ್ಲಾಧಿಕಾರಿಗಳ ಕೋರಿಕೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಹಣ ಬಿಡುಗಡೆ ಮಾಡಲು ತೀರ್ಮಾನಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 137 ಟಿಎನ್‌ಆರ್ 2009, ಬೆಂಗಳೂರು, ದಿನಾಂಕ: 17ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಪ್ರಕೃತಿ ವಿಕೋಪ ಪರಿಹಾರ ಕಾರ್ಯ ಕೈಗೊಳ್ಳಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಈ ಕೆಳಕಂಡಂತೆ ಜಿಲ್ಲಾಧಿಕಾರಿಗಳಿಗೆ ಅನುದಾನ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

| ಕ್ರ. ಸಂ. | ಜಿಲ್ಲೆಯ ಹೆಸರು | ರೂ. ಲಕ್ಷಗಳಲ್ಲಿ |
|---|---|---|
| 1 | ದಕ್ಷಿಣ ಕನ್ನಡ | 500.00 |
| 2 | ಉತ್ತರ ಕನ್ನಡ | 500.00 |
| 3 | ಉಡುಪಿ | 500.00 |
| 4 | ಶಿವಮೊಗ್ಗ | 500.00 |
| | **ಒಟ್ಟು** | **2000.00** |

(ರೂ. ಎರಡು ಸಾವಿರ ಲಕ್ಷಗಳು ಮಾತ್ರ)

1) ಮೇಲಿನಂತೆ ಬಿಡುಗಡೆ ಮಾಡಿದ ಹಣವನ್ನು ಈ ಕೆಳಕಂಡಂತೆ ಆದ್ಯತೆಯ ಮೇರೆಗೆ ಉಪಯೋಗಿಸುವುದು.

a) ಮಾನವ / ಪ್ರಾಣಿ ಜೀವಹಾನಿ

b) ಮನೆ ಹಾನಿ

c) ಬೆಳೆಹಾನಿ

d) ಕುಡಿಯುವ ನೀರು ಸರಬರಾಜು

e) ಮೇವು ಸರಬರಾಜು

f) ಹಾನಿಗೊಳಗಾದ ಮೂಲಭೂತ ಸೌಕರ್ಯಗಳ ತುರ್ತು ರಿಪೇರಿ

2) ಕೇಂದ್ರ ಸರ್ಕಾರವು ದಿನಾಂಕ: 27–06–2007 ರಂದು ಹೊರಡಿಸಿರುವ ಮಾರ್ಗಸೂಚಿಗಳ ಪ್ರಕಾರ ವೆಚ್ಚ ಮಾಡುವುದು.

3) ಅನುದಾನ ಲಭ್ಯತೆ ಇಲ್ಲದೇ ಯಾವುದೇ ದುರಸ್ತಿ ಕಾಮಗಾರಿಗಳನ್ನು ಸಿಆರ್‌ಎಫ್/ಎನ್‌ಸಿಸಿಎಫ್ ಅಡಿಯಲ್ಲಿ ಕೈಗೊಳ್ಳುವಂತಿಲ್ಲ. ಹಾಗೂ ಕಾಮಗಾರಿಗಳನ್ನು ಬಿಡುಗಡೆಯಾದ ಅನುದಾನಕ್ಕೆ ಸೀಮಿತಗೊಳಿಸುವುದು.

4) ಪ್ರಕೃತಿ ವಿಕೋಪದಿಂದ ಆದಂತಹ ವಿಪತ್ತು ಹಾನಿಗೆ ಮಾತ್ರ ಪರಿಹಾರ ನೀಡುವುದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು ಪೇಯೀಸ್ ರಸೀದಿ ಬಿಲ್ಲುಗಳನ್ನು ತಯಾರಿಸಿ ಮೇಲು ರುಜು ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಸಿ.ಆರ್.ಎಫ್. ಪಿ.ಡಿ. ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು 2009–10ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 2245–02–110–0–01–100 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆಗಳನ್ನು ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 692 ವೆಚ್ಚ–7/2009 ದಿನಾಂಕ: 17–07–2009ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ದೇಸಾಯಿ**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ, ಸರ್ಕಾರದ ಉಪ ಕಾರ್ಯದರ್ಶಿ,
ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ ಮತ್ತು ಸೇವೆಗಳು)

ಪಿ.ಆರ್. 1768

## COMMERCE AND INDUSTRIES SECRETARIAT

**Sub:** Implementation of Integrated Sugar Factory Project at Hullatti Village, Haliyala Taluk, Uttara Kannada District by M/s Bharath Sugar Mills Ltd. – Consideration of their project under 2006-11 Industrial Policy – Reg.

**Read:**
1. Govt. Order No. CI 22 SPI 2006 Dt: 05-05-2006
2. Company's representation Dt: 19.12.2008.
3. Letter No. ID/E3/ETE-BSM/2008-09 Dt:20.05.2009

**Preamble:**

In the Govt. Order read above at (1), the incentives and concessions was offered as per Industrial Policy 2001-06 to M/s Bharath Sugar Mills Ltd. to establish Integrated Sugar Factory project.

The said company has represented vide letter dated 19.12.2008 read above at (2) to consider the incentives and concessions as applicable in Industrial Policy 2006-11. The said representation was referred to the Commissioner for Industrial Development and Director of Industries & Commerce for verification of the proposal vide letter dated 11.03.2009. The Joint Director (ID), Industries & Commerce Dept. has recommended to consider the said project under the Industrial Policy 2006-11, since the said unit has taken effective steps only after the issual of Govt. Order i.e. after 05-05-2006 and investments have been made only after 01.04.2006.

The proposal has been examined. Hence the following order.

**Govt. Order No. CI 65 SPI 2009, Bangalore, Dated: 17th July 2009**

In the circumstances explained in the preamble, Government is pleased to consider the incentives and concessions to M/s Bharath Sugar Mills Ltd. under Industrial Policy 2006-11 for the reasons cited in the preamble.

By Order and in the name of the Governor of Karnataka

P.R. 1776

**APARNA PAVATE**

Desk Officer (Technical Cell), Commerce & Industries Department.

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಅಪರ ನಿರ್ದೇಶಕರು (ಸಪ್ರಕೈ) ಹುದ್ದೆಯನ್ನು ಅಪರ ನಿರ್ದೇಶಕರು (ಎಂ.ಎಸ್.ಎಂ.ಇ.) ಎಂದು ಮರು ಪದನಾಮಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಕೈಗಾರಿಕಾಭಿವೃದ್ಧಿ ಆಯುಕ್ತರ ಪತ್ರ ಸಂಖ್ಯೆ ಆಡಳಿತ/ಸಿಬ್ಬಂದಿ/ಇ2/32/2009–10 ದಿ:09.06.2009
2. ಸಣ್ಣ ಪ್ರಮಾಣದ ಕೈಗಾರಿಕೆಗಳ ಮಂತ್ರಾಲಯ, ಭಾರತ ಸರ್ಕಾರ ಹೊರಡಿಸಿರುವ ಅಧಿಸೂಚನೆ ಸಂಖ್ಯೆ ಎಸ್.ಒ. 1154 (ಇ) ದಿ: 18–07–2006

**ಪ್ರಸ್ತಾವನೆ:**

ಮೇಲೆ ಓದಲಾದ (2)ರ ಪತ್ರದಲ್ಲಿ Micro, Small & Medium Enterprises (MSME) ಕಾಯ್ದೆ 2006 ಜಾರಿಗೆ ತರಲಾಗಿರುವುದನ್ನು ಪ್ರಸ್ತಾಪಿಸಿ ಕೇಂದ್ರ ಸರ್ಕಾರದ ಪತ್ರ ವ್ಯವಹಾರಗಳಲ್ಲಿ MSME ಎಂದು ಉಲ್ಲೇಖಿಸಲಾಗುತ್ತಿದ್ದು ಈ ಹಿನ್ನೆಲೆಯಲ್ಲಿ ಸಮಾನಾಂತರ ಕ್ರಮವಾಗಿ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಅಪರ ನಿರ್ದೇಶಕರು (ಸ.ಪ್ರ.ಕೈ.) ಹುದ್ದೆಯ ಪದನಾಮವನ್ನು ಅಪರ ನಿರ್ದೇಶಕರು (ಎಂ.ಎಸ್.ಎಂ.ಇ,) ಎಂದು ಮರುಪದನಾಮಗೊಳಿಸಲು ಕೈಗಾರಿಕಾ ನಿರ್ದೇಶನಾಲಯ ಶಿಫಾರಸ್ಸು ಮಾಡಿರುತ್ತದೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 137 ಕೈಸೇವಿ 2009, ಬೆಂಗಳೂರು, ದಿನಾಂಕ: 23ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಲಾಗಿರುವ ಅಂಶಗಳ ಹಿನ್ನೆಲೆಯಲ್ಲಿ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯಲ್ಲಿನ ಅಪರ ನಿರ್ದೇಶಕರು (ಸಪ್ರಕೈ) ಹುದ್ದೆಯ ಪದನಾಮವನ್ನು ಅಪರ ನಿರ್ದೇಶಕರು (ಎಂ.ಎಸ್.ಎಂ.ಇ.) ಎಂದು ಮರುಪದನಾಮಗೊಳಿಸಿ ಆದೇಶಿಸಲಾಗಿದೆ. ಈ ಕುರಿತಂತೆ ಸಿ ಅಂಡ್ ಆರ್ ನಿಯಮ ಹಾಗೂ ಕರ್ನಾಟಕ ಸರ್ಕಾರ (ವ್ಯವಹಾರ ಹಂಚಿಕೆ) ನಿಯಮಗಳಿಗೆ ತಿದ್ದುಪಡಿ ತರಲು ಪ್ರತ್ಯೇಕವಾಗಿ ಕ್ರಮ ಜರುಗಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಸಿ. ಪ್ರಕಾಶ್**

ಪಿ.ಆರ್. 1777

ಸರ್ಕಾರದ ಅಧೀನ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸೇವೆಗಳು)

## HORTICULTURE SECRETARIAT

**Sub:** "Scheme for Integrated Farming in Coconut for Productivity/ Improvement with Coconut Development Board Assistance (100% CDB)" – Release of funds reg.

**Read:** 1) GO. No. AHD 53 HPP 2009, dated 24.06.2009.

2) Letter of CDB F.No.597/2009 –DEV(Kar) dated 7/13.7.2009

3) Government Letter No.ಕೃತೋಇ 53 ತೋಯೋಕಾ 2009 dated 14.7.2009

**Preamble:**

1. During the year 2009-10, State Level Administrative Approval for implementing the Coconut Development Board Programmes with a total financial outlay of Rs.632.294 lakhs vide Government Order read at (1) above. Under these programmes components to the tune of Rs.303.03 lakhs will be implemented by the Department of Horticulture and components to the tune of Rs.329.264 lakhs will be implemented by the Coconut Development Board directly.

2. Coconut Development Board vide its letter read at (2) above has released an amount of Rs.1,74,28,000/- (Rupees One Crore Seventy Four Lakhs Twenty Eight Thousand only) to the Secretary, Horticulture through a Demand Draft No.994901 dated 1.7.2009 as first installment during 2009-10 for the following purpose.

| Particulars | Amount (Rs.) |
|---|---|
| Integrated Farming in coconut holdings for Productivity Improvement in Karnataka State: | |
| a) Laying out of demonstration plots (500 ha-New) | 87,50,000/- |
| (296 ha-Maintenance) | 51,78,000/- |
| b) Organic manure unit | 35,00,000/- |
| **TOTAL** | **1,74,28,000/-** |

The said D.D has been sent to the Director of Horticulture for remittance to Treasury vide Government Letter cited at (3) above.

3. The issue of releasing of funds to the Director of Horticulture was discussed in detail during MPIC review meeting held on 15.7.2009 under the Chairmanship of Secretary, Horticulture. It was decided to release funds for the first two quarters and hence this order;

**Government Order No.AHD 53 HPP 2009, Bangalore, Dated: 28th July 2009**

Government is pleased to release an amount of Rs.1,74,28,000/- (Rupees One Crore Seventy Four Lakhs Twenty Eight Thousand only) to the Director of Horticulture under the "Scheme for Integrated Farming in Coconut for Productivity/ Improvement" in the State during 2009-10 under the Head of Account 2401-00-108-2-35-100 (Financial Assistance/ Relief).

2. This order is issued as per the delegation of powers vested with Secretaries vide Government Order No.FD 1 TFP 2008 dated 16.5.2008 and concurrence by the Internal Financial Advisor, Agriculture and Horticulture Department vide Note No.ಕೃತೋಇ 168 ಆಂಆಸ 2009 dated 24.7.2009.

By order and in the name of Governor of Karnataka

**S. RAJU**

P.R. 1787 Under Secretary to Government, Horticulture Department.

## ತೋಟಗಾರಿಕೆ ಸಚಿವಾಲಯ

**ವಿಷಯ:** ಕೋಲಾರ ಜಿಲ್ಲೆಯಲ್ಲಿ ತೋಟಗಾರಿಕೆ ಕಾಲೇಜನ್ನು ಸ್ಥಾಪಿಸುವ ಬಗ್ಗೆ.

**ಓದಲಾಗಿದೆ:** ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ:ತೋಇ:ಯೋ:ಸತೋಅ–1:06:2009–10:4, ದಿನಾಂಕ:28/30.4.2009.

**ಪ್ರಸ್ತಾವನೆ:**

ಕೋಲಾರ ಜಿಲ್ಲೆಯು ತೋಟಗಾರಿಕೆ ಬೆಳೆಗಳನ್ನು ಅಭಿವೃದ್ಧಿಪಡಿಸಲು ಸೂಕ್ತವಾದ ತೋಟಗಾರಿಕೆ ಹವಾಮಾನ ಮತ್ತು ನೈಸರ್ಗಿಕ ಸಂಪತ್ತುಗಳನ್ನು ಹೊಂದಿರುತ್ತದೆ. ಈ ಪ್ರದೇಶದ ಸುತ್ತಮುತ್ತಲಿನ ಪ್ರಾಂತ್ಯಗಳಲ್ಲಿ ತೋಟಗಾರಿಕೆ ಅಭಿವೃದ್ಧಿಗೆ ಇರುವ ಅವಕಾಶವನ್ನು ಮನಗಂಡು ಆಧುನಿಕ ತಂತ್ರಜ್ಞಾನವನ್ನು ಶಿಕ್ಷಣದ ಮೂಲಕ ಪ್ರಸಾರ ಮಾಡಲು ಅನುವಾಗುವಂತೆ ತೋಟಗಾರಿಕೆ ಕಾಲೇಜನ್ನು ಸ್ಥಾಪಿಸಲು 2009–10ನೇ ಸಾಲಿನ ಆಯವ್ಯಯ ಭಾಷಣದ ಪ್ಯಾರಾ 50ರಲ್ಲಿ ಹಣ್ಣು ಮತ್ತು ತೋಟಗಾರಿಕೆ ಬೆಳೆಗಳಿಗೆ ಹೆಸರುವಾಸಿಯಾದ ಕೋಲಾರ ಜಿಲ್ಲೆಯಲ್ಲಿ ನೂತನ ತೋಟಗಾರಿಕೆ ಕಾಲೇಜನ್ನು ಸ್ಥಾಪಿಸಲು ರೂ.5.00 ಕೋಟಿಗಳನ್ನು ನೀಡಲಾಗುವುದು ಎಂದು ಘೋಷಿಸಲಾಗಿದೆ. ಈ ಅನ್ವಯ ಕೋಲಾರದಲ್ಲಿ ತೋಟಗಾರಿಕೆ ಕಾಲೇಜು (2401–00–800–2–44–101 ಎಂಬ ಹೊಸ ಯೋಜನೆಯಡಿ ರೂ.5.00 ಕೋಟಿಗಳನ್ನು ಒದಗಿಸಲಾಗಿದೆ.

ಮೇಲೆ ಓದಲಾದ ತೋಟಗಾರಿಕೆ ನಿರ್ದೇಶಕರ ಪತ್ರದಲ್ಲಿ ಕೋಲಾರ ಜಿಲ್ಲೆಯಲ್ಲಿ ಹಣ್ಣು ಮತ್ತು ತೋಟಗಾರಿಕೆ ಬೆಳೆಗಳಿಗೆ ಹೆಸರುವಾಸಿಯಾದ ಕೋಲಾರ ಜಿಲ್ಲೆಯಲ್ಲಿ ನೂತನ ತೋಟಗಾರಿಕೆ ಕಾಲೇಜನ್ನು ಸ್ಥಾಪಿಸುವ ಬಗ್ಗೆ ವಿವರಗಳನ್ನು ಮಂಡಿಸಿ 2009–10ನೇ ಸಾಲಿನಲ್ಲಿ ಇದನ್ನು ಹೊಸ ಯೋಜನೆಗಾಗಿ ಮಂಜೂರು ಮಾಡಲು ಮನವಿ ಮಾಡಿರುತ್ತಾರೆ. ಅದನ್ನು ಪರಿಶೀಲಿಸಿ, ಕೆಳಕಾಣಿಸಿದ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಕೃತೋಇ 114 ತೊಇವಿ 2009, ಬೆಂಗಳೂರು, ದಿನಾಂಕ: 23ನೇ ಜುಲೈ 2009**

ಬಾಗಲಕೋಟೆಯಲ್ಲಿರುವ ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾನಿಲಯದ ವ್ಯಾಪ್ತಿಯಲ್ಲಿ ಕೋಲಾರದಲ್ಲಿ ತೋಟಗಾರಿಕೆ ಕಾಲೇಜನ್ನು 2009–10ನೇ ಸಾಲಿನ ಶೈಕ್ಷಣಿಕ ವರ್ಷದಿಂದಲೇ ಆರಂಭಿಸಲು ವಿಶೇಷಾಧಿಕಾರಿ, ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ,ಬಾಗಲಕೋಟೆ ಇವರಿಗೆ ಅನುಮತಿ ನೀಡಲಾಗಿದೆ. ಈ ಉದ್ದೇಶಕ್ಕಾಗಿ ಹೊಸ ಲೆಕ್ಕಶೀಷಿಕೆ 2401–00–800–2–44–101 (ಸಹಾಯಾನುದಾನ)ದಡಿ ವಿಶೇಷಾಧಿಕಾರಿ, ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ ಬಾಗಲಕೋಟೆ ಇವರಿಗೆ ರೂ.500.00(ಐದು ನೂರು ಲಕ್ಷಗಳು ಮಾತ್ರ)ಗಳನ್ನು ಮಂಜೂರು ಮಾಡಲಾಗಿದೆ. ಈ ಪೈಕಿ ರೂ.125.00(ಒಂದು ನೂರ ಇಪ್ಪತ್ತೈದು ಲಕ್ಷಗಳು ಮಾತ್ರ)ಗಳನ್ನು ಈ ಆದೇಶದ ಮೂಲಕ ಬಿಡುಗಡೆ ಮಾಡಲಾಗಿದೆ. ಸದರಿ ಸಹಾಯಧನ ಪಡೆಯಲು ಮಂಡಿಸುವ ಬಿಲ್ಲಿಗೆ ಮೇಲು ಸಹಿ ಮಾಡಲು ತೋಟಗಾರಿಕೆ ನಿರ್ದೇಶಕರಿಗೆ ಅನುಮತಿ ನೀಡಲಾಗಿದೆ.

ಈ ಆದೇಶವನ್ನು ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ:ಪಿಡಿ 27 ಪಿಎಫ್ಓ 2009, ದಿನಾಂಕ:17.6.2009, ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 327 ವೆಚ್ಚ–4:2009, ದಿನಾಂಕ:26.6.2009ರ ಸಹಮತಿಯಂತೆ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1788

**ಎಸ್. ರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ, ತೋಟಗಾರಿಕೆ ಇಲಾಖೆ

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಟರ್ನ್ ಕೀ ಆಧಾರದ ಮೇಲೆ ಗಂಗಾ ಕಲ್ಯಾಣ ಯೋಜನೆಯನ್ನು ಅನುಷ್ಠಾನಗೊಳಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಕಇ 152 ಎಸ್‌ಡಿಸಿ 2002 ದಿನಾಂಕ: 6–6–2006

2) ಪತ್ರ ಸಂಖ್ಯೆ ಡಾ: ಬಿ.ಆರ್.ಅಂ.ಅ.ನಿ/ಗಂಕಯೋ/ಘ.ವೆ/2008–09/4020, ದಿನಾಂಕ:24–07–2008

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಗಂಗಾ ಕಲ್ಯಾಣ ಯೋಜನೆ ಅಡಿ ಕೊರೆಯುವ ವೈಯಕ್ತಿಕ ಕೊಳವೆ ಬಾವಿಗಳ ಘಟಕ ವೆಚ್ಚವನ್ನು ರೂ. 1.00 ಲಕ್ಷ ನಿಗಧಿಪಡಿಸಲಾಗಿದ್ದು, ಈ ಮೊತ್ತದಲ್ಲಿ ರೂ. 86,000.00 ಸಹಾಯ ಧನವಾಗಿದ್ದು ಉಳಿದ ರೂ. 14,000.00 ಸಾಲ ಆಗಿರುತ್ತದೆ. ಈ ಘಟಕ ವೆಚ್ಚದಲ್ಲಿ ವೈಯಕ್ತಿಕ ಕೊಳವೆ ಬಾವಿಗಳಿಗೆ ವಿದ್ಯುಚ್ಛಕ್ತಿ ಸರಬರಾಜು ಮಾಡುವ ಕಂಪನಿಗಳಿಗೆ ವಿದ್ಯುಚ್ಛಕ್ತಿ ಸಂಪರ್ಕ ಪಡೆಯುವ ಸಲುವಾಗಿ ಪಾವತಿಸುವ ಡಿಪಾಸಿಟ್ ಹಣ (ವಾರ್ಷಿಕ ಕನಿಷ್ಠ ಠೇವಣಿ) ಸಹಾ ಸೇರಿರುತ್ತದೆ. ಗಂಗಾ ಕಲ್ಯಾಣ ಯೋಜನೆ ಅಡಿ ವೈಯಕ್ತಿಕ ಕೊಳವೆ ಬಾವಿ ಹಾಗೂ ಸಾಮೂಹಿಕ ಕೊಳವೆ ಬಾವಿ ಇದ್ದು, ಸಾಮೂಹಿಕ ಕೊಳವೆ ಬಾವಿಗಳ ಕುರಿತಂತೆ 02 ಕೊಳವೆ ಬಾವಿಗಳ ಹಾಗೂ 03 ಕೊಳವೆ ಬಾವಿಗಳ ಘಟಕ ವೆಚ್ಚವು ಕ್ರಮವಾಗಿ ರೂ. 2.53 ಲಕ್ಷ ಹಾಗೂ ರೂ. 3.59 ಲಕ್ಷ ಆಗಿರುತ್ತದೆ.

ಕೊಳವೆ ಬಾವಿಗಳನ್ನು "ನೀರಿಲ್ಲದಿದ್ದರೆ ಹಣವಿಲ್ಲ" ಎಂಬುದರ ಆಧಾರದ ಮೇಲೆ ಕೊರೆಯಲಾಗುತ್ತಿದೆ, ಅಂದರೆ 1000 ಜಿ.ಪಿ.ಹೆಚ್. ನಷ್ಟು ಕನಿಷ್ಠ ನೀರಿನ ಇಳುವರಿ ಇರಬೇಕೆಂಬ ಷರತ್ತನ್ನು ಪೂರೈಸಿದಲ್ಲಿ ಮಾತ್ರ ಕೊರೆಯುವಿಕೆದಾರರು ಕೊರೆಯುವ ವೆಚ್ಚವನ್ನು ಪಡೆಯುತ್ತಾರೆ.

ಪ್ರಸ್ತುತ ಕೊಳವೆಬಾವಿಗಳನ್ನು ಕೊರೆಯಲು ಹಾಗೂ ಕೇಸಿಂಗ್ ಪೈಪ್ ಅಳವಡಿಸಿ ನೀರಿನ ಇಳುವರಿ ಪರೀಕ್ಷೆಯನ್ನು ಗಣಿ ಮತ್ತು ಭೂ ವಿಜ್ಞಾನ ಇಲಾಖೆಯಿಂದ ಮಾಡಿಸುವ ಸಲುವಾಗಿ ಜಿಲ್ಲಾಧಿಕಾರಿಗಳ ಮಟ್ಟದಲ್ಲಿ ಟೆಂಡರ್‌ಗಳನ್ನು ಆಹ್ವಾನಿಸಲಾಗುತ್ತಿದ್ದು, ಪಂಪ್ ಮೋಟಾರುಗಳು ಹಾಗೂ ಪೂರಕಗಳನ್ನು ಸರಬರಾಜು ಮಾಡುವುದರ ಜೊತೆಗೆ ಪಂಪ್ ಮೋಟಾರು ಅಳವಡಿಸಿ ವಿದ್ಯುದ್ಧೀಕರಣಗೊಳಿಸಲು ನಿಗಮದ ವ್ಯವಸ್ಥಾಪಕ ನಿರ್ದೇಶಕರ ಮಟ್ಟದಲ್ಲಿ ಟಂಡರ್‌ಗಳನ್ನು ಆಹ್ವಾನಿಸಲಾಗುತ್ತಿದೆ.

ಈ ಕುರಿತಂತೆ ವ್ಯವಸ್ಥಾಪಕ ನಿರ್ದೇಶಕರು, ಡಾ: ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮ ನಿಯಮಿತ ಇವರು ಸಲ್ಲಿಸುವ ಕ್ರೂಢೀಕೃತ ಪ್ರಸ್ತಾವನೆಯನ್ನು ಸರ್ಕಾರದ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ರಚಿಸಲ್ಪಟ್ಟ ಖರೀದಿ ಸಮಿತಿಯಲ್ಲಿ ಚರ್ಚಿಸಿದ ನಂತರ ಟಂಡರ್‌ಗಳನ್ನು ಅಂತಿಮಗೊಳಿಸಲಾಗುತ್ತದೆ.

ಡಾ: ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮ, ಕರ್ನಾಟಕ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮ, ದೇವರಾಜು ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ಮತ್ತು ಕರ್ನಾಟಕ ಅಲ್ಪ ಸಂಖ್ಯಾತರ ನಿಗಮ–ಗಂಗಾ ಕಲ್ಯಾಣ ಯೋಜನೆಯನ್ನು ಅನುಷ್ಠಾನಗೊಳಿಸುತ್ತಿದ್ದು, ಕೊಳವೆ ಬಾವಿಗಳ ಕೊರೆಯುವಿಕೆ ಹಾಗೂ ಕೊಳವೆ ಬಾವಿಗಳ ಸ್ಥಾಪಿಸುವ ಚಟುವಟಿಕೆಗಳು ಆಂತರಿಕ ಸಂಬಂಧ ಹೊಂದಿದ್ದರೂ ಪ್ರತ್ಯೇಕವಾಗಿ ಟಂಡರ್‌ಗಳನ್ನು ಆಹ್ವಾನಿಸುವುದಲ್ಲದೆ, ವಿದ್ಯುತ್ ಸಂಪರ್ಕ ಕಲ್ಪಿಸುವಲ್ಲಿ ವಿಳಂಬ ಉಂಟಾಗುವುದರ ಪರಿಣಾಮವಾಗಿ ಯೋಜನೆಯ ಮೇಲೆ ಪ್ರತಿಕೂಲ ಪರಿಣಾಮ ಉಂಟು ಮಾಡುತ್ತಿದೆ.

ಈ ಹಿನ್ನೆಲೆಯಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 48 ಎಸ್‌ಡಿಸಿ 2008, ಬೆಂಗಳೂರು, ದಿನಾಂಕ: 16ನೇ ಜುಲೈ 2009**

ಗಂಗಾ ಕಲ್ಯಾಣ ಯೋಜನೆಯನ್ನು "ಟರ್ನ್ ಕೀ ಆಧಾರದ ಮೇಲೆ" ಅನುಷ್ಠಾನಗೊಳಿಸುವ ಸಲುವಾಗಿ ಕೊಳವೆ ಬಾವಿಗಳನ್ನು ಕೊರೆಯುವ, ಪಂಪ್‌ಸೆಟ್‌ಗಳನ್ನು ಸರಬರಾಜು/ಅಳವಡಿಸುವ ಹಾಗೂ ಅಂತಹ ಕೊಳವೆ ಬಾವಿಗಳಿಗೆ ಬೇಕಾಗುವ ವಿದ್ಯುತ್ ಸರಬರಾಜು ಸೇರಿದಂತೆ ಒಂದೆ ಪ್ಯಾಕೇಜಿನಲ್ಲಿ ಟೆಂಡರ್ ಕರೆಯಲು ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಕಇ 152 ಎಸ್‌ಡಿಸಿ 2002 ದಿನಾಂಕ: 6–6–2006 ರಲ್ಲಿ ನಿಗಧಿಪಡಿಸಲಾದ ರೂ. 1.00 ಲಕ್ಷ ಘಟಕ ದರವನ್ನು ತೆಗೆದು ಹಾಕಿ ಮುಕ್ತ ಹರಾಜಿನಲ್ಲಿ ಬಿಡ್ಸ್ ಮುಖಾಂತರ ಸ್ವೀಕರಿಸುವ ದರಗಳನ್ನು ಪರಿಗಣಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ರಾಮಸ್ವಾಮಿ**

ಪಿ.ಆರ್. 1789

ಸರ್ಕಾರದ ಅಧೀನ ಕಾರ್ಯದರ್ಶಿ–2 (ಪ್ರ),
ಸಮಾಜ ಕಲ್ಯಾಣ ಇಲಾಖೆ

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಕಂದಾಯ ನಿರೀಕ್ಷಕರ ಹುದ್ದೆಯನ್ನು ರದ್ದುಪಡಿಸುವ ಕುರಿತು.

**ಓದಲಾಗಿದೆ:** 1) ಅಧಿಸೂಚನೆ ಸಂಖ್ಯೆ ಸಿಆಸುಇ 23 ಎಸ್‌ಸಿಆರ್ 89, ದಿನಾಂಕ : 6.11.1992.

**ಪ್ರಸ್ತಾವನೆ:**

ಮೇಲೆ ಓದಲಾದ 1ರ ದಿನಾಂಕ 6.11.1992ರ ಅಧಿಸೂಚನೆಯಲ್ಲಿ ಕರ್ನಾಟಕ ಸರ್ಕಾರಿ ಸಚಿವಾಲಯದ (ನೇಮಕಾತಿ) ನಿಯಮಗಳು 1992ನ್ನು ಹೊರಡಿಸಲಾಗಿದೆ. ಅದರಲ್ಲಿ ಸಚಿವಾಲಯದ ಸಿಬ್ಬಂದಿಗಳ ಗೃಹ ನಿರ್ಮಾಣ ಮುಂಗಡ ಸಾಲ ಪಡೆದಂತಹ ಸಂದರ್ಭದಲ್ಲಿ ಗೃಹ ನಿರ್ಮಾಣ ಕಾರ್ಯದ ಪ್ರಗತಿ, ದ್ವಿತೀಯ ಕಂತು ಮಂಜೂರು ಆಗುವ ಸಮಯದಲ್ಲಿ ಕಟ್ಟಡದ ಪ್ರಗತಿ ಕುರಿತು ಪರಿವೀಕ್ಷಣೆ ನಿರ್ಮಾಣ ಪೂರ್ಣಗೊಂಡ ನಂತರ ಸ್ಥಳದ ಪರಿವೀಕ್ಷಣೆ ವರದಿ, ನೋಟೀಸ್ ಜಾರಿ ಮಾಡುವ ಕೆಲಸಕಾರ್ಯಗಳನ್ನು ನಿರ್ವಹಿಸಲು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ–ಎ) ಶಾಖೆಯಲ್ಲಿ ಒಂದು ಕಂದಾಯ ನಿರೀಕ್ಷಕ (ಪ್ರಥಮ ದರ್ಜೆ ಸಹಾಯಕ) ಹುದ್ದೆಯನ್ನು ಕಂದಾಯ ಇಲಾಖೆಯಿಂದ ನಿಯೋಜನೆ ಮೇಲೆ ತುಂಬಲು ಅವಕಾಶವನ್ನು ಮಾಡಲಾಗಿತ್ತು.

ಪ್ರಸ್ತುತ ಈ ಹುದ್ದೆ ಖಾಲಿ ಇರುತ್ತದೆ ಹಾಗೂ ಹೆಚ್.ಡಿ.ಎಫ್.ಸಿ. ಯಿಂದ ಗೃಹ ನಿರ್ಮಾಣಕ್ಕಾಗಿ ಮುಂಗಡ ಹಣವನ್ನು ಮಂಜೂರು ಮಾಡುತ್ತಿಲ್ಲವಾದ್ದರಿಂದ ಹಾಗೂ ಈ ಹುದ್ದೆಗೆ ನಿಗದಿಪಡಿಸಿರುವ ಕೆಲಸ ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಇಲ್ಲದೆ ಇರುವುದರಿಂದ ಈ ಹುದ್ದೆಯನ್ನು ರದ್ದುಪಡಿಸಲು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ. ಹಾಗೂ ಸಚಿವಾಲಯದ ವೃಂದ ಮತ್ತು ನೇಮಕಾತಿ ನಿಯಮಗಳಡಿ ಸೂಕ್ತ ತಿದ್ದುಪಡಿಯನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 27 ಆಸಸೇ 2008, ಬೆಂಗಳೂರು, ದಿನಾಂಕ: 21ನೇ ಜುಲೈ 2009**

ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಆಸುಇ 225 ಆಸಸೇ 2006, ದಿನಾಂಕ 30.11.2006ರಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯ (ನೇಮಕಾತಿ) ನಿಯಮಗಳು 1992ರಲ್ಲಿ ಕಂದಾಯ ಇಲಾಖೆಯಿಂದ ನಿಯೋಜನೆ ಮೇಲೆ ತುಂಬಲಾಗುತ್ತಿದ್ದ ಒಂದು ಕಂದಾಯ ನಿರೀಕ್ಷಕರ ಹುದ್ದೆಯನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ತಾರಾ**

ಪಿ.ಆರ್. 1793

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ–1).

**ಸೇರ್ಪಡೆ**

**ಸಂಖ್ಯೆ: ಸಿಆಸುಇ 30 ಪಿಎಫ್‌ಜಿ 2006 (ಭಾಗ), ದಿನಾಂಕ: 20ನೇ ಜುಲೈ 2009**

ದಿನಾಂಕ: 04.02.2009 ಸಂಖ್ಯೆ:ಸಿಆಸುಇ 30 ಪಿಎಫ್‌ಜಿ 2006 (ಭಾಗ) ರ ಸರ್ಕಾರಿ ಆದೇಶದ ಮೊದಲನೇ ಸಾಲಿನಲ್ಲಿ "ಸ್ವಾತಂತ್ರ್ಯ ಹೋರಾಟಗಾರರ ಪತ್ನಿ/ವಿಧವಾ ಪತ್ನಿಯವರಿಗೆ ಕರ್ನಾಟಕ ರಾಜ್ಯ ಸಾರಿಗೆ ಸಂಸ್ಥೆಯ ಬಸ್ಸುಗಳಲ್ಲಿ" ಎಂಬುದಕ್ಕೆ ಬದಲಾಗಿ "ಸ್ವಾತಂತ್ರ್ಯ ಹೋರಾಟಗಾರರ ಪತ್ನಿ/ವಿಧವಾ ಪತ್ನಿಯರಿಗೆ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ, ಬೆಂಗಳೂರು, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ ಬೆಂಗಳೂರು ವಾಯುವ್ಯ–ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ, ಹುಬ್ಬಳ್ಳಿ ಮತ್ತು ಈಶಾನ್ಯ–ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ, ಗುಲ್ಬರ್ಗಾ ಬಸ್ಸುಗಳಲ್ಲಿ" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಲ್.ಎಸ್. ಚಂದ್ರಶೇಖರರಾವ್**

ಪಿ.ಆರ್. 1795 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಸು–ರಾಜಕೀಯ ವಿಶ್ರಾಂತಿ ವೇತನ)

**ವಿಷಯ:** ಶ್ರೀ ಐ.ಎಸ್.ಎನ್. ಪ್ರಸಾದ್, ಐ.ಎ.ಎಸ್. ರವರ ಕಡ್ಡಾಯ ನಿರೀಕ್ಷಣಾ ಅವಧಿಯನ್ನು ಸಕ್ರಮಗೊಳಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಆಸುಇ 75 ಎಸ್‌ಎಎಸ್ 2009 ದಿ: 08–07–2009.
2) ಶ್ರೀ ಐ.ಎಸ್.ಎನ್. ಪ್ರಸಾದ್, ಐ.ಎ.ಎಸ್., ರವರ ಪತ್ರ ದಿ: 14–07–2009.

**ಪ್ರಸ್ತಾವನೆ:**

ಶ್ರೀ ಐ.ಎಸ್.ಎನ್. ಪ್ರಸಾದ್, ಐ.ಎ.ಎಸ್, ಇವರ ಕೇಂದ್ರ ನಿಯೋಜನೆಯು ಮುಕ್ತಾಯಗೊಂಡ ನಂತರ, ಸದರಿಯವರು ಕರ್ನಾಟಕ ರಾಜ್ಯ ಸರ್ಕಾರದಲ್ಲಿ ದಿನಾಂಕ 6.7.2009 ರಂದು ಕರ್ತವ್ಯಕ್ಕೆ ವರದಿ ಮಾಡಿಕೊಂಡು ನೇಮಕಾತಿ ನಿರೀಕ್ಷಣೆಯಲ್ಲಿದ್ದರು. ತದನಂತರ ಅವರನ್ನು ಮೇಲೆ ಕ್ರಮಾಂಕ (1) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಮುಖ್ಯ ಯೋಜನಾ ಅಧಿಕಾರಿ, ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ (ಕೆ.ಎಸ್.ಹೆಚ್.ಐ.ಪಿ.), ಬೆಂಗಳೂರು, ಹುದ್ದೆಗೆ ನೇಮಿಸಿದ್ದರ ಮೇರೆಗೆ ಅವರು ದಿನಾಂಕ 10–07–2009ರ ಪೂರ್ವಾಹ್ನ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ.

ಮೇಲೆ ಕ್ರಮಾಂಕ (2) ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಐ.ಎಸ್.ಎನ್. ಪ್ರಸಾದ್, ಐ.ಎ.ಎಸ್. ರವರು ದಿನಾಂಕ:6.7.2009 ರಿಂದ 9.7.2009ರ ವರೆಗೆ ನೇಮಕಾತಿ ನಿರೀಕ್ಷಣೆಯಲ್ಲಿ ಕಳೆದ ಅವಧಿಯನ್ನು ಸಕ್ರಮಗೊಳಿಸುವ ನಿಟ್ಟಿನಲ್ಲಿ ಸೂಕ್ತ ಆದೇಶ ಹೊರಡಿಸಲು ಕೋರಿದ್ದಾರೆ. ಸರ್ಕಾರವು ಪ್ರಕರಣವನ್ನು ಪರಿಶೀಲಿಸಿದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 144 ಎಸ್‌ಎಎಸ್ 2009, ಬೆಂಗಳೂರು, ದಿನಾಂಕ: 29ನೇ ಜುಲೈ, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಐ.ಎಸ್.ಎನ್. ಪ್ರಸಾದ್, ಐ.ಎ.ಎಸ್.ರವರು ದಿನಾಂಕ:6.7.2009 ರಿಂದ 9.7.2009ರ ವರೆಗೆ ಕಳೆದ ಅವಧಿಯನ್ನು ಸರ್ಕಾರವು ಈ ಕೆಳಕಂಡಂತೆ ಪರಿಗಣಿಸಿ ಸಕ್ರಮಗೊಳಿಸಿದೆ.

1. ದಿನಾಂಕ 6.7.2009 ರಿಂದ 8.7.2009ರವರೆಗಿನ ಅವಧಿಯನ್ನು ಕ.ನಾ.ಸೇ. ನಿಯಮಗಳ ನಿಯಮ 8(15) (ಎಫ್) ರಡಿಯಲ್ಲಿ ಕಡ್ಡಾಯ ನಿರೀಕ್ಷಣಾ ಅವಧಿಯೆಂದು ಪರಿಗಣಿಸಿದೆ.
2. ದಿನಾಂಕ 9.7.2009 ರಂದು ಒಂದು ದಿನದ ಗಳಿಕೆ ರಜೆಯೆಂದು ಪರಿಗಣಿಸಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ/1/ಟಿಎಫ್‌ಪಿ/96, ದಿ: 10–07–96 ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ನೀಡಲಾದ ವಿತ್ತಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಜಿ. ಅನಂತ**

ಪಿ.ಆರ್. 1796 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–1)

**ವಿಷಯ:** ಶ್ರೀ ಎ. ಮರೀಗೌಡ, ಕೆ.ಎ.ಎಸ್. (ಕಿರಿಯ ಶ್ರೇಣಿ), ಹಿಂದಿನ ಉಪ ನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ರಾಮನಗರ ಜಿಲ್ಲೆ, ರಾಮನಗರ, ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣ ಮತ್ತು ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ:** 1) ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ದಿನಾಂಕ:15.06.09 ರ ಪತ್ರ ಸಂಖ್ಯೆ Lok/INV(G)/GD-33/CR-3/2009/ರಾಮನಗರ
2) ಆರಕ್ಷಕ ಉಪಾಧೀಕ್ಷಕರು, ಕರ್ನಾಟಕ ಲೋಕಾಯುಕ್ತ, ರಾಮನಗರ, ಇವರ ದಿನಾಂಕ : 24.06.09ರ ಪತ್ರ ಸಂಖ್ಯೆ : ಸಿಆರ್‌ಎಂ/ಕಲೋ/ಸಿಆರ್/03/2009

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಶ್ರೀ ಎ. ಮರೀಗೌಡ, ಹಿಂದಿನ ಉಪ ನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ರಾಮನಗರ ಜಿಲ್ಲೆ, ರಾಮನಗರ ರವರನ್ನು ಕೆಳಕಂಡ ಪ್ರಕರಣದಲ್ಲಿ ವಿವರಿಸಿರುವಂತೆ ಇವರ ವಿರುದ್ಧದ ಭ್ರಷ್ಟಾಚಾರದ ಆಪಾದನೆ ಮೇಲ್ನೋಟಕ್ಕೆ ಸಾಬೀತಾಗಿರುವ ಕಾರಣ, ಪ್ರಕರಣದ ಸುಗಮ ತನಿಖೆಗೆ ಅಡ್ಡಿಯುಂಟು ಮಾಡುವ ಅಥವಾ ತನಿಖೆಯಲ್ಲಿ ಹಸ್ತಕ್ಷೇಪ ಮಾಡುವ ಹಾಗೂ ಸಾಕ್ಷಿ ಪುರಾವೆಗಳನ್ನು ನಾಶಗೊಳಿಸುವ ಸಾಧ್ಯತೆಗಳಿರುವುದರಿಂದ ಇವರನ್ನು ಅಮಾನತ್ತಿನಲ್ಲಿಡಬೇಕೆಂದು ಮತ್ತು ಇವರ ಲೀನ್ (ಸ್ಥಾನ) ಅನ್ನು ಬೇರೆ ಕಡೆಗೆ ವರ್ಗಾಯಿಸಲು ಶಿಫಾರಸ್ಸು ಮಾಡುತ್ತಾ, ತಮ್ಮ ವರದಿಯೊಂದಿಗೆ ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ ಮತ್ತು ಟ್ರ್ಯಾಪ್ ಪಂಚನಾಮೆಗಳನ್ನು ಲಗತ್ತಿಸಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಶ್ರೀ ಜಿ.ಎಸ್. ವಿಶಾಲಾಕ್ಷ @ ರವಿ ಬಿನ್ ಜಿ.ಎಸ್. ಸಿದ್ಧಯ್ಯ, ಇವರ ಕನಕಪುರ ತಾಲ್ಲೂಕು, ಹಾರೋಹಳ್ಳಿ ಹೋಬಳಿ, ಗಬ್ಬಾಡಿ ಗ್ರಾಮದಲ್ಲಿನ ನ್ಯಾಯ ಬೆಲೆ ಅಂಗಡಿಯಲ್ಲಿ ಪಡಿತರ ಸಾಮಾನುಗಳು ಸರಿಯಾಗಿ ವಿತರಣೆಯಾಗುತ್ತಿಲ್ಲವೆಂಬ ಬೇನಾಮಿದಾರರೊಬ್ಬರ ದೂರನ್ನು ಆಧರಿಸಿ, ಆಹಾರ ನಿರೀಕ್ಷಕರು ಸಲ್ಲಿಸಿದ ವರದಿಯ ಸಂಬಂಧವಾಗಿ ಸದರಿ ನ್ಯಾಯಬೆಲೆಯ ಪರವಾನಗಿಯನ್ನು ಅಮಾನತ್ತುಪಡಿಸದೇ ಇರಲು ಶ್ರೀ ಮರೀಗೌಡ ರವರು ರೂ.10,000.00 ಗಳ ಲಂಚದ ಹಣಕ್ಕೆ ಒತ್ತಾಯಿಸಿರುವರೆಂದೂ, ಇದಕ್ಕೆ ಇಷ್ಟವಿಲ್ಲದಿದ್ದರಿಂದ ಈ ಎಲ್ಲ ವಿವರಗಳನ್ನು ಶ್ರೀ ವಿಶಾಲಾಕ್ಷ ರವರು ದಿನಾಂಕ: 3.6.09 ರಂದು ರಾಮನಗರ ಲೋಕಾಯುಕ್ತ ಪೊಲೀಸರಲ್ಲಿ ದೂರು ದಾಖಲಿಸಿರುತ್ತಾರೆ. ಈ ದೂರನ್ನು ಆಧರಿಸಿ, ಪೊಲೀಸ್ ಉಪಾಧೀಕ್ಷಕರು, ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ರಾಮನಗರ, ಇವರು ಮೇಲ್ಕಂಡ ಅಧಿಕಾರಿಯ ವಿರುದ್ಧ ಲಂಚ ನಿರೋಧಕ ಕಾಯ್ದೆ 1988 ರ ಕಲಂ 7, 13(1) ರ ಜೊತೆಗೆ 13(2)ರ ಪ್ರಕಾರ ಮೊಕದ್ದಮೆ ಸಂಖ್ಯೆ: 03/2009 ರಲ್ಲಿ ಪ್ರಕರಣ ದಾಖಲಿಸಿರುತ್ತಾರೆ.

ತನಿಖಾಧಿಕಾರಿಗಳು ಎಲ್ಲ ಪ್ರಾಥಮಿಕ ಪ್ರಕ್ರಿಯೆಗಳನ್ನು ಕೈಗೊಂಡು, ಫಿರ್ಯಾದುದಾರರಾದ ಶ್ರೀ ವಿಶಾಲಾಕ್ಷ, ಮತ್ತೊಬ್ಬರಾದ ಶ್ರೀ ಆರ್. ರಂಗಯ್ಯ ಮತ್ತು ಪಂಚ–1 ರವರುಗಳನ್ನು ದಿನಾಂಕ 3.6.09 ರಂದು ರಾಮನಗರದ ಲೋಕ ರುಚಿ ಹೋಟಲಿನ ಹತ್ತಿರ ಆರೋಪಿತ ಅಧಿಕಾರಿ ಶ್ರೀ ಮರೀಗೌಡ ರವರನ್ನು ಭೇಟಿ ಮಾಡಿ ಲಂಚದ ಹಣವನ್ನು ನೀಡಲು ವ್ಯವಸ್ಥೆ ಮಾಡಿರುತ್ತಾರೆ. ಈ ಸಂದರ್ಭದಲ್ಲಿ ಶ್ರೀ ರಂಗಯ್ಯ ರವರ ಮೂಲಕ ಆರೋಪಿತ ಅಧಿಕಾರಿಯು ರೂ. 10,000–00 ಗಳ ಲಂಚದ ಹಣವನ್ನು ಸ್ವೀಕರಿಸುತ್ತಿದ್ದಾಗ, ಲೋಕಾಯುಕ್ತ ಪೊಲೀಸರು ಬೀಸಿದ ಬಲೆಗೆ ಸಿಕ್ಕಿಬಿದ್ದಿರುತ್ತಾರೆ. ಲಂಚದ ಹಣ ನೀಡಿದ ಶ್ರೀ ರಂಗಯ್ಯ ಮತ್ತು ಸ್ವೀಕರಿಸಿದ ಶ್ರೀ ಮರೀಗೌಡ ರವರ ಕೈಗಳನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಅದ್ದಿದಾಗ, ನೀರು ತಿಳಿ ಗುಲಾಬಿ ಬಣ್ಣಕ್ಕೆ ಬದಲಾಗಿರುತ್ತದೆ. ಇದರಿಂದಾಗಿ, ಆರೋಪಿತ ಅಧಿಕಾರಿ ಲಂಚದ ಹಣವನ್ನು ಸ್ವೀಕರಿಸಿರುವುದು ದೃಢಪಟ್ಟಿರುತ್ತದೆ ಲಂಚದ ಹಣವನ್ನು ಜೀಪಿನ ಸೀಟಿನ ಅಡಿ ಬಿದ್ದಿರುವುದನ್ನು ಪಂಚನ ಸಾಕ್ಷಿದಾರರುಗಳ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ. ಆರೋಪಿತರು ಲಂಚದ ಹಣಕ್ಕಾಗಿ ಒತ್ತಾಯಿಸಿ ಸ್ವೀಕರಿಸಿರುವುದನ್ನು ಫಿರ್ಯಾದುದಾರರು, ನೆರಳು ಸಾಕ್ಷಿದಾರರು ತಮ್ಮ ಹೇಳಿಕೆಯಲ್ಲಿ ತಿಳಿಸಿರುತ್ತಾರೆ. ನಂತರ ಆರೋಪಿಯನ್ನು ದಸ್ತಗಿರಿ ಮಾಡಿ, ದಸ್ತಗಿರಿ ಕ್ರಮಗಳನ್ನು ಅನುಸರಿಸಿ, ನ್ಯಾಯಾಲಯದ ಮುಂದೆ ಹಾಜರುಪಡಿಸಲು ಅವೇಳೆಯಾದ ಕಾರಣ, ಆರೋಪಿತರನ್ನು ಪೊಲೀಸು ಠಾಣೆಯಲ್ಲಿ ಬಂಧನದಲ್ಲಿರಿಸಿ, ದಿನಾಂಕ: 4.6.09 ರಂದು ಜಿಲ್ಲಾ ಸತ್ರ ಮತ್ತು ವಿಶೇಷ ನ್ಯಾಯಾಲಯದ ಮುಂದೆ ಹಾಜರುಪಡಿಸಿದ್ದು, ಮಾನ್ಯ ನ್ಯಾಯಾಲಯವು ಆರೋಪಿಯನ್ನು ಸಕ್ಷಮ ನ್ಯಾಯಾಲಯವು ದಿನಾಂಕ: 5.6.09 ರಂದು ಜಾಮೀನಿನ ಮೇಲೆ ಬಿಡುಗಡೆ ಮಾಡಿರುವುದಾಗಿ ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ವರದಿ ಮಾಡಲಾಗಿದೆ.

ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಆಪಾದಿತ ಅಧಿಕಾರಿಯು ಲಂಚದ ಹಣವನ್ನು ಸ್ವೀಕರಿಸುತ್ತಿರುವಾಗ ಲೋಕಾಯುಕ್ತ ಪೊಲೀಸರಿಗೆ ನೇರವಾಗಿ ಸಿಕ್ಕಿಬಿದ್ದಿರುವುದರಿಂದಲೂ, ಕೈಗಳನ್ನು ದ್ರಾವಣದಲ್ಲಿ ಅದ್ದಿದಾಗ ಬಣ್ಣ ಬದಲಾಗಿರುವುದರಿಂದಲೂ, ಮೇಲ್ನೋಟಕ್ಕೆ ಭ್ರಷ್ಟಾಚಾರದ ಆಪಾದನೆಯು ಸಾಬೀತುಗೊಂಡಿದೆ ಎಂದು ಭಾವಿಸಿರುವುದರಿಂದಲೂ, ಪ್ರಕರಣದ ಸುಗಮ ತನಿಖೆಗೆ ಅವಕಾಶ ಕಲ್ಪಿಸುವ ಅವಶ್ಯಕತೆ ಇರುವುದರಿಂದಲೂ, ಸರ್ಕಾರವು ಶ್ರೀ ಎ. ಮರೀಗೌಡ, ಕೆ.ಎ.ಎಸ್ (ಕಿರಿಯ ಶ್ರೇಣಿ), ಹಿಂದಿನ ಉಪ ನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ರಾಮನಗರ ಜಿಲ್ಲೆ, ರಾಮನಗರ, ಇವರನ್ನು ಮುಂದಿನ ತನಿಖೆ/ವಿಚಾರಣೆಯನ್ನು ಕಾಯ್ದಿರಿಸಿ, ಸೇವೆಯಿಂದ ಅಮಾನತ್ತಿನಲ್ಲಿರಿಸಲು ನಿರ್ಣಯಿಸಿ, ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 017 ಕೆಇವಿ 09, ಬೆಂಗಳೂರು, ದಿನಾಂಕ: 24ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ 10ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶಿಸ್ತು ಕ್ರಮವನ್ನು ಕಾಯ್ದಿರಿಸಿ, ಸರ್ಕಾರವು ಶ್ರೀ ಎ. ಮರೀಗೌಡ, ಕೆ.ಎ.ಎಸ್ (ಕಿರಿಯ ಶ್ರೇಣಿ), ಹಿಂದಿನ ಉಪ ನಿರ್ದೇಶಕರು, ಆಹಾರ ಮತ್ತು ನಾಗರೀಕ

ಸರಬರಾಜು ಇಲಾಖೆ, ರಾಮನಗರ ಜಿಲ್ಲೆ, ರಾಮನಗರ ಹಾಗೂ ಪ್ರಸ್ತುತ ನೇಮಕಾತಿ ನಿರೀಕ್ಷಣೆಯಲ್ಲಿರುವ ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತಿನಲ್ಲಿಡುತ್ತದೆ ಹಾಗೂ ಇವರ ಲೀನ್ (ಸ್ಥಾನ) ಅನ್ನು ಬಾಡಿಗೆ ನಿಯಂತ್ರಣಾಧಿಕಾರಿ, ಬೆಂಗಳೂರು (ದಕ್ಷಿಣ), ಬೆಂಗಳೂರು ಹುದ್ದೆಗೆ (ಖಾಲಿ) ವರ್ಗಾಯಿಸಿ ಗುರುತಿಸಿರುತ್ತದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಎ. ಮರೀಗೌಡ, ಕೆ.ಎ.ಎಸ್. (ಕಿರಿಯ ಶ್ರೇಣಿ) ರವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98 ರಂತೆ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ. ಅಮಾನತ್ತಿನ ಅವಧಿಯಲ್ಲಿ ಇವರು ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಪಡೆಯದೇ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್. ನಾಗೇಂದ್ರ**

ಪಿ.ಆರ್. 1797 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**ವಿಷಯ:** ಶ್ರೀ ಹೆಚ್.ಎಸ್. ರಾಮಕೃಷ್ಣ, ಕೆ.ಎ.ಎಸ್. (ಕಿರಿಯ ಶ್ರೇಣಿ), ಹಿಂದಿನ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ, ಶಿವಮೊಗ್ಗ, ಇವರ ವಿರುದ್ಧ ಇಲಾಖಾ ವಿಚಾರಣೆ – ಅಂತಿಮ ಆದೇಶ.

**ಓದಲಾಗಿದೆ:**
1) ದಿನಾಂಕ: 7.11.07ರ ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 020 ಕೆಇವಿ 07
2) ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ಹಾಗೂ ವಿಚಾರಣಾಧಿಕಾರಿಗಳು ಇವರ ದಿನಾಂಕ: 26.6.08ರ ವಿಚಾರಣಾ ವರದಿ
3) ದಿನಾಂಕ: 06/18.08.08ರ 2ನೇ ಕಾರಣ ಕೇಳುವ ನೋಟೀಸು ಸಂಖ್ಯೆ: ಸಿಆಸುಇ 020 ಕೆಇವಿ 07
4) ಶ್ರೀ ಹೆಚ್.ಎಸ್. ರಾಮಕೃಷ್ಣ, ಕೆ.ಎ.ಎಸ್. (ಕಿರಿಯ ಶ್ರೇಣಿ) ಇವರ ದಿನಾಂಕ: 29.08.08ರ ಲಿಖಿತ ಉತ್ತರ.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ ಶ್ರೀ ಹೆಚ್.ಎಸ್. ರಾಮಕೃಷ್ಣ, ಕೆ.ಎ.ಎಸ್. (ಕಿರಿಯ ಶ್ರೇಣಿ) ಇವರು ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ, ಶಿವಮೊಗ್ಗ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಆರು ಅನುದಾನಿತ ವಸತಿ ನಿಲಯಗಳಿಗೆ ಸಂಬಂಧಿಸಿದಂತೆ ಆಹಾರ ವೆಚ್ಚದ ಬಿಲ್ಲುಗಳನ್ನು ಹೆಚ್ಚಿಗೆ ಡ್ರಾ ಮಾಡಿ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟುಮಾಡಿರುವ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆಯ ಮೂಲಕ ತಿಳಿಯುವ ಸಲುವಾಗಿ ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ, ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 11 (2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ,ಆರೋಪದ ಬಗ್ಗೆ ವಿಚಾರಣೆ ನಡೆಸಿ ವರದಿ ಸಲ್ಲಿಸಲು ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರಂತೆ ವಿಚಾರಣಾಧಿಕಾರಿಯವರು ಸಲ್ಲಿಸಿದ ವಿಚಾರಣಾ ವರದಿಯಲ್ಲಿ ಶ್ರೀ ಹೆಚ್.ಎಸ್. ರಾಮಕೃಷ್ಣ, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ, ಇವರ ವಿರುದ್ಧದ ಆಹಾರ ವೆಚ್ಚದ ಬಿಲ್ಲುಗಳನ್ನು ಹೆಚ್ಚಿಗೆ ಡ್ರಾ ಮಾಡಿ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟುಮಾಡಿರುವ ಆರೋಪವು ಸಾಬೀತಾಗಿದೆ ಎಂದು ವರದಿ ನೀಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿನ 2ನೇ ಕಾರಣ ಕೇಳುವ ನೋಟೀಸಿನ ಜೊತೆ ವಿಚಾರಣಾ ವರದಿಯ ಪ್ರತಿಯನ್ನು ಆಪಾದಿತರಿಗೆ ಒದಗಿಸಿ, ಮೇಲೆ ಓದಲಾದ ಕ್ರಮ ಸಂಖ್ಯೆ (4) ರಲ್ಲಿ ಲಿಖಿತ ಉತ್ತರದಲ್ಲಿ ವಿವರಣೆಯನ್ನು ಪಡೆಯಲಾಗಿದೆ. ವಿಚಾರಣಾ ವರದಿಯನ್ನು ಹಾಗೂ ಅಧಿಕಾರಿಯು ನೀಡಿದ ಉತ್ತರವನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 020 ಕೆಇವಿ 07, ಬೆಂಗಳೂರು, ದಿನಾಂಕ: 23ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಸರ್ಕಾರವು, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ, ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 8 (iii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಹೆಚ್.ಎಸ್. ರಾಮಕೃಷ್ಣ, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ (ಪ್ರಸ್ತುತ ವಿಶೇಷ ಭೂ ಸ್ವಾಧೀನಾಧಿಕಾರಿ, ಕರ್ನಾಟಕ ಕೈಗಾರಿಕಾ ಅಭಿವೃದ್ಧಿ ಮಂಡಳಿ, ಬೆಂಗಳೂರು ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ) ಇವರಿಗೆ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರದಂತೆ (without cumulative effect) ತಡೆಹಿಡಿಯುವ ದಂಡನೆ ವಿಧಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್. ನಾಗೇಂದ್ರ**

ಪಿ.ಆರ್. 1798 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 6 ಇಮುವಿ 2009, ಬೆಂಗಳೂರು, ದಿನಾಂಕ: 15ನೇ ಜುಲೈ 2009**

**ವಿಷಯ:** ಶ್ರೀ ಎಸ್.ಸಿ. ಜಯಚಂದ್ರ, ಮುಖ್ಯ ಇಂಜಿನಿಯರ್ ಅವರ ಅಮಾನತ್ತನ್ನು ರದ್ದುಪಡಿಸಿ ಮತ್ತೆ ಸೇವೆಗೆ ತೆಗೆದುಕೊಳ್ಳುವ ಬಗ್ಗೆ.

ಶ್ರೀ ಎಸ್.ಸಿ. ಜಯಚಂದ್ರ, ಮುಖ್ಯ ಇಂಜಿನಿಯರ್ ಅವರನ್ನು ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 6 ಇಮುವಿ 2009, ದಿನಾಂಕ: 5.6.2009ರಲ್ಲಿ ಸೇವೆಯಿಂದ ಅಮಾನತ್ತಿನಲ್ಲಿಟ್ಟಿರುವುದರಿಂದಲೂ,

ಶ್ರೀ ಎಸ್.ಸಿ. ಜಯಚಂದ್ರ, ಮುಖ್ಯ ಇಂಜಿನಿಯರ್ ಅವರ ಅಮಾನತ್ತನ್ನು ರದ್ದುಪಡಿಸಿ ಅವರನ್ನು ಮತ್ತೇ ಸೇವೆಗೆ ತೆಗೆದುಕೊಳ್ಳಬೇಕೆಂದು ಸರ್ಕಾರವು ತೀರ್ಮಾನಿಸಿರುವುದರಿಂದಲೂ,

ಆದ್ದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ, ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(5)(ಸಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀ ಎಸ್.ಸಿ. ಜಯಚಂದ್ರ, ಮುಖ್ಯ ಇಂಜಿನಿಯರ್ ಅವರ ವಿರುದ್ಧ ಶಿಸ್ತಿನ ಕ್ರಮ/ಲೋಕಾಯುಕ್ತ ತನಿಖೆಯನ್ನು ಬಾಕಿ ಇಟ್ಟು ಅವರ ಅಮಾನತ್ತನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿ ಅವರನ್ನು ಈ ಮೂಲಕ ಸೇವೆಗೆ ತೆಗೆದುಕೊಳ್ಳುತ್ತದೆ.

ಶ್ರೀ ಎಸ್.ಸಿ. ಜಯಚಂದ್ರ, ಮುಖ್ಯ ಇಂಜಿನಿಯರ್ ಅವರನ್ನು ಸೂಕ್ತ ಹುದ್ದೆಗೆ ನಿಯುಕ್ತಿಗೊಳಿಸಲು ಪ್ರತ್ಯೇಕವಾಗಿ ಕ್ರಮ ಕೈಗೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 1799

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ಒಳಾಡಳಿತ ಸಚಿವಾಲಯ**

**ವಿಷಯ:** ಖಾಸಗಿ ವಕೀಲರನ್ನು ಸರ್ಕಾರದ ಪರವಾಗಿ ಪ್ರಕರಣಗಳನ್ನು ನಡೆಸಲು, ವಿಶೇಷ ಸರ್ಕಾರಿ ಅಭಿಯೋಜಕರಾಗಿ ನೇಮಿಸಿದ ಪ್ರಕರಣಗಳಲ್ಲಿ ಸಂಭಾವನೆ/ಶುಲ್ಕ ನಿಗದಿಗೊಳಿಸುವ ಬಗೆಗಿನ ಸಮಿತಿಯನ್ನು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ:** 1) ದಿನಾಂಕ 18.5.2005 ರಂದು ಪ್ರಧಾನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, ಇವರ ಕೊಠಡಿಯಲ್ಲಿ ನಡೆದ ಸಭೆಯ ನಡಾವಳಿಗಳು

2) ಸರ್ಕಾರದ ಆದೇಶ ಸಂಖ್ಯೆ : ಒಇ: 540:ಪಿಪಿಇ: 2005 ದಿನಾಂಕ: 18.7.2005

**ಪ್ರಸ್ತಾವನೆ:**

ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ, ಮತ್ತು ಸೇವಾ ಷರತ್ತುಗಳು) ನಿಯಮಾವಳಿ–1977ರ ನಿಯಮ–30ರಲ್ಲಿ ಯಾವುದೇ ಅಪರಾಧಿಕ ಪ್ರಕರಣ ಅಥವಾ ಯಾವುದೇ ಮೇಲ್ಮನವಿ ಅಥವಾ ಅದಕ್ಕೆ ಸಂಬಂಧಿಸಿದ ಯಾವುದೇ ನಡವಳಿಗಳನ್ನು ಸರ್ಕಾರದ ಪರವಾಗಿ ನಡೆಸಲು ಯಾವುದೇ ವಕೀಲರನ್ನು ವಿಶೇಷ ಸರ್ಕಾರಿ ಅಭಿಯೋಜಕರಾಗಿ ನೇಮಿಸಲು ಸರ್ಕಾರಕ್ಕೆ ಅಧಿಕಾರವನ್ನು ಪ್ರದತ್ತಗೊಳಿಸುವ ಉಪಬಂಧವನ್ನು ಮಾಡಲಾಗಿದೆ, ಮತ್ತು ಹಾಗೆ ವಿಶೇಷ ಸರ್ಕಾರಿ ಅಭಿಯೋಜಕರಾಗಿ ನೇಮಿಸಲ್ಪಟ್ಟ ವಕೀಲರಿಗೆ ಪ್ರತಿಯೊಂದು ಪ್ರಕರಣದಲ್ಲೂ ಪ್ರಕರಣದ ಸ್ವರೂಪವನ್ನು ಗಮನದಲ್ಲಿರಿಸಿಕೊಂಡು ಸರ್ಕಾರವು ನಿರ್ಧರಿಸಬಹುದಾದಂತಹ ಸಂಭಾವನೆಯನ್ನು ಸಂದಾಯಿಸಬಹುದಾಗಿದೆ.

ಯಾವುದೇ ಪ್ರಕರಣದಲ್ಲಿ ಅಥವಾ ಪ್ರಕರಣಗಳ ವರ್ಗದಲ್ಲಿ ಯಾವುದೇ ವಕೀಲರನ್ನು ವಿಶೇಷ ಸರ್ಕಾರಿ ಅಭಿಯೋಜಕರಾಗಿ ನೇಮಿಸಲ್ಪಟ್ಟ ಪ್ರಕರಣಗಳಲ್ಲಿ ಪ್ರಕರಣದ ಪ್ರಾಮುಖ್ಯತೆ:ಸಂಕೀರ್ಣತೆ ಮತ್ತು ಪ್ರಕರಣದ ಸ್ಥಿತಿಗತಿ, ಪ್ರಕರಣದಲ್ಲಿ ವಿಚಾರಣೆಯ ಸ್ವರೂಪ, ನ್ಯಾಯಾಲಯ ಇರುವ ಸ್ಥಳ ಮತ್ತು ವಕೀಲರ ವಾಸ ಸ್ಥಳ ಇತ್ಯಾದಿ ಅಂಶಗಳನ್ನು ಪರಿಶೀಲಿಸಿ ವಕೀಲರ ಸಂಭಾವನೆ/ಶುಲ್ಕವನ್ನು ನಿಗದಿಗೊಳಿಸಲು ಮೇಲೆ (2) ರಲ್ಲಿ ಓದಲಾದ ದಿನಾಂಕ: 18.7.2005 ರ ಅದೇಶದಲ್ಲಿ (1) ಪ್ರಧಾನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, ಇವರನ್ನು ಅಧ್ಯಕ್ಷರನ್ನಾಗಿ, (2) ಕಾರ್ಯದರ್ಶಿ, ಕಾನೂನು ಇಲಾಖೆ, ಹಾಗೂ (3) ಅಪರ ಕಾರ್ಯದರ್ಶಿ–1, ಕಾನೂನು ಇಲಾಖೆ, ಇವರನ್ನು ಸದಸ್ಯರುಗಳನ್ನಾಗಿ ಮತ್ತು ಒಳಾಡಳಿತ ಇಲಾಖೆಯ ಜಂಟಿ ಕಾರ್ಯದರ್ಶಿ (ಕಾನೂನು ಮತ್ತು ಸುವ್ಯವಸ್ಥೆ) ಇವರನ್ನು ಸಂಚಾಲಕರನ್ನಾಗಿ ಒಳಗೊಂಡ ಸಮಿತಿಯನ್ನು ರಚಿಸಲಾಗಿತ್ತು.

ಹಾಲಿ ಒಳಾಡಳಿತ ಇಲಾಖೆಯಲ್ಲಿ ಅಭಿಯೋಜನೆಗೆ ಸಂಬಂಧಪಟ್ಟ ಪ್ರಕರಣಗಳು ಹಾಗೂ ಕಾನೂನು ಇಲಾಖೆಯಿಂದ ಗೃಹ ಇಲಾಖೆಗೆ ವರ್ಗಾವಣೆಯಾದ ಕ್ರಿಮಿನಲ್ ವಿಷಯವನ್ನು ಕಾರ್ಯದರ್ಶಿ (ಪಿಸಿಎಎಸ್)ರವರು ನಿರ್ವಹಿಸುತ್ತಿರುವುದರಿಂದ, ಇವರನ್ನು ಹಾಗೂ ಸಂಭಾವನೆ/ಶುಲ್ಕ ಮಂಜೂರು ಮಾಡಲು ಆರ್ಥಿಕ ಇಲಾಖೆಯ ಸಹಮತದೊಂದಿಗೆ ಆದೇಶ ಹೊರಡಿಸಬೇಕಾಗಿರುವುದರಿಂದ ಆರ್ಥಿಕ ಇಲಾಖೆಯ ಅಧಿಕಾರಿಯೊಬ್ಬರನ್ನು ಸದರಿ ಸಮಿತಿಯ ಸದಸ್ಯರನ್ನಾಗಿ ನೇಮಿಸುವುದು ಸಮಂಜಸವಾಗಿದೆ. ಅಲ್ಲದೆ ಒಳಾಡಳಿತ ಇಲಾಖೆಯಲ್ಲಿ ಸಂಭಾವನೆ ಮಂಜೂರಾತಿಯ ವಿಷಯವನ್ನು 1ನೇ ಅಪರ ವಾದೇಕ್ಷಕರು

ನಿರ್ವಹಿಸುತ್ತಿರುವುದರಿಂದ ಜಂಟಿ ಕಾರ್ಯದರ್ಶಿ (ಕಾನೂನು ಮತ್ತು ಸುವ್ಯವಸ್ಥೆ) ಇವರ ಬದಲಾಗಿ 1ನೇ ಅಪರ ವಾದೇಕ್ಷಕರನ್ನು ಸದಸ್ಯ ಕಾರ್ಯದರ್ಶಿಗಳನ್ನಾಗಿ ನೇಮಿಸಬಹುದಾಗಿದೆ. ಕಾನೂನು ಇಲಾಖೆಯ ಕಾರ್ಯದರ್ಶಿ ಹಾಗೂ ಅಪರ ಕಾರ್ಯದರ್ಶಿ–I, ಇವರಲ್ಲಿ ಒಬ್ಬರನ್ನು ಸದಸ್ಯರನ್ನಾಗಿ ನೇಮಿಸಬಹುದಾಗಿದೆ ಎಂದು ಕಂಡು ಬಂದಿರುವುದರಿಂದ ಮೇಲೆ (2) ರಲ್ಲಿ ಓದಲಾದ ದಿನಾಂಕ: 18.7.2005ರ ಆದೇಶದಲ್ಲಿರುವ ಸಮಿತಿಯನ್ನು ಪರಿಷ್ಕರಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ:4948:ಹೆಚ್‌ಸಿಪಿ–2:2009, ಬೆಂಗಳೂರು, ದಿನಾಂಕ: 28ನೇ ಜುಲೈ 2009**

ಯಾವುದೇ ಕ್ರಿಮಿನಲ್ ಪ್ರಕರಣ ಅಥವಾ ಪ್ರಕರಣಗಳ ವರ್ಗಗಳಲ್ಲಿ ಸರ್ಕಾರದ ಪರವಾಗಿ ಪ್ರಕರಣಗಳನ್ನು ನಡೆಸಲು ಯಾವುದೇ ವಕೀಲರನ್ನು : ನ್ಯಾಯವಾದಿಗಳನ್ನು ವಿಶೇಷ ಸರ್ಕಾರಿ ಅಭಿಯೋಜಕರನ್ನಾಗಿ ನೇಮಿಸಲ್ಪಟ್ಟ ಪ್ರಕರಣಗಳಲ್ಲಿ ಅಂತಹ ವಕೀಲರ ಸಂಭಾವನೆ/ಶುಲ್ಕವನ್ನು ನಿರ್ಧರಿಸುವ ಬಗ್ಗೆ ಈ ಕೆಳಕಂಡ ಸಂಭಾವನಾ ನಿರ್ಧಾರಣಾ ಸಮಿತಿಯನ್ನು ಕೂಡಲೇ ಜಾರಿಗೆ ಬರುವಂತೆ ರಚಿಸಲಾಗಿದೆ.

| | | |
|---|---|---|
| 1) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಒಳಾಡಳಿತ ಇಲಾಖೆ | – | ಅಧ್ಯಕ್ಷರು |
| 2) ಸರ್ಕಾರದ ಕಾರ್ಯದರ್ಶಿ, ಕಾನೂನು, ನ್ಯಾಯ ಮತ್ತು ಮತ್ತು ಮಾನವ ಹಕ್ಕುಗಳ ಇಲಾಖೆ | – | ಸದಸ್ಯರು |
| 3) ಸರ್ಕಾರದ ಕಾರ್ಯದರ್ಶಿಗಳು (ವೆಚ್ಚ) ಆರ್ಥಿಕ ಇಲಾಖೆ | – | ಸದಸ್ಯರು |
| 4) ಸರ್ಕಾರದ ಕಾರ್ಯದರ್ಶಿಗಳು (ಪಿಸಿಎಎಸ್) ಒಳಾಡಳಿತ ಇಲಾಖೆ | – | ಸದಸ್ಯರು |
| 5) ಒಂದನೇ ಅಪರ ವಾದೇಕ್ಷಕರು ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಒಳಾಡಳಿತ ಇಲಾಖೆ. | – | ಸದಸ್ಯ–ಕಾರ್ಯದರ್ಶಿ |

ಸಮಿತಿಯ ಸಭೆಯನ್ನು ತಿಂಗಳಿಗೊಮ್ಮೆ ಅಥವಾ ಅವಶ್ಯಕತೆಗೆ ಅನುಸಾರ ನಡೆಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಗುರುಮೂರ್ತಿ**

ಪಿ.ಆರ್. 1806

ಒಂದನೇ ಅಪರ ವಾದೇಕ್ಷಕರು ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ, (ಪ್ರ), ಒಳಾಡಳಿತ ಇಲಾಖೆ.

**ವಿಷಯ:** ಶ್ರೀ ರಮೇಶ್ ಕುಲಕರ್ಣಿ, ಪ್ರೊ .ಪಿ.ಎಸ್.ಐ. ಎಂ.ಎಂ. ಹಳ್ಳಿ, ಪೊಲೀಸ್ ಠಾಣೆ, ಬಳ್ಳಾರಿ ಜಿಲ್ಲೆ, ರವರ ಖಾಯಂ ಪೂರ್ವ ಅವಧಿ ವಿಸ್ತರಿಸುವ ಕುರಿತು.

**ಓದಲಾಗಿದೆ:** ಡಿ.ಜಿ. ಮತ್ತು ಐಪಿಜಿ ರವರ ಪತ್ರ ಸಂಖ್ಯೆ : 63/ಸಿಬ್ಬಂದಿ–1/2007–08 ದಿನಾಂಕ: 31.10.2008

**ಪ್ರಸ್ತಾವನೆ:**

ಶ್ರೀ ರಮೇಶ್ ಕುಲಕರ್ಣಿ, ಪ್ರೊ: ಪಿ.ಎಸ್.ಐ. ಎಂ.ಎಂ. ಹಳ್ಳಿ ಪೊಲೀಸ್ ಠಾಣೆ, ಬಳ್ಳಾರಿ ಜಿಲ್ಲೆ, ರವರು ಪಿ.ಎಸ್.ಐ. (ಸಿವಿಲ್) ಹುದ್ದೆಗೆ ದಿನಾಂಕ: 15.12.2003 ರಂದು ನೇಮಕಾತಿ ಹೊಂದಿ, ಬುನಾದಿ ತರಬೇತಿಯಲ್ಲಿ ಅಂತಿಮವಾಗಿ ನಡೆಸಿದ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿರುತ್ತಾರೆ. ಕನ್ನಡ ಭಾಷಾ ಪರೀಕ್ಷೆಯನ್ನು ಪಾಸಲು ಮಾಡಲು ವಿನಾಯಿತಿ ಪಡೆದಿರುತ್ತಾರೆ. ಆದರೆ, ಅಕೌಂಟ್ಸ್ ಹೈಯರ್ ಪರೀಕ್ಷೆಯನ್ನು ಈವರೆಗೂ ಪಾಸು ಮಾಡಿರುವುದಿಲ್ಲ. ಸದರಿ ಪಿ.ಎಸ್.ಐ. ರವರು ದಿನಾಂಕ:14.06.2006ಕ್ಕೆ $2^1/_2$ ವರ್ಷಗಳ ಖಾಯಂಪೂರ್ವ ಅವಧಿಯನ್ನು ಪೂರ್ಣಗೊಳಿಸಿರುತ್ತಾರೆ. ಇವರು ಚಾಲ್ತಿ ಶಿಕ್ಷೆಯಲ್ಲಿರುವ ಮೇರೆಗೆ ಹಾಗೂ ಅಕೌಂಟ್ಸ್ ಹೈಯರ್ ಪರೀಕ್ಷೆಯನ್ನು ಪಾಸು ಮಾಡದಿರುವುದರಿಂದ, ಐಜಿಪಿ, ಪೂರ್ವ ವಲಯ ದಾವಣಗೆರೆ ರವರ ಆದೇಶ ದಿ: 6.11.2007 ರಲ್ಲಿ 1977ರ ಕೆ.ಸಿ.ಎಸ್. (ಪ್ರೊಬೇಷನ್) ನಿಯಮಾವಳಿ 4(1)(ii)ರ ಮೇರೆಗೆ ಇವರ ಖಾಯಂಪೂರ್ವ ಅವಧಿಯನ್ನು 14.06.2006 ರಿಂದ 14.09.2007 ರವರೆಗೆ ವಿಸ್ತರಿಸಿರುತ್ತಾರೆ.

ಸದರಿ ಪಿ.ಎಸ್.ಐ. ರವರ 2004–05, 2005–06 ಮತ್ತು 2006–07ನೇ ಸಾಲಿನ ಎ.ಸಿ.ಆರ್ ನಲ್ಲಿ ಪ್ರತಿಕೂಲ ಷರಾ ಇಲ್ಲದಿರುವುದರಿಂದ, ಇವರು ಈವರೆಗೂ ಅಕೌಂಟ್ಸ್ ಹೈಯರ್ ಇಲಾಖಾ ಪರೀಕ್ಷೆಯನ್ನು ಪಾಸು ಮಾಡದೆ ಇದ್ದು ಮತ್ತು ದಿನಾಂಕ: 31.05.2009 ರವರೆಗೆ ಚಾಲ್ತಿ ಶಿಕ್ಷೆಯಲ್ಲಿರುವುದರಿಂದ ಶ್ರೀ ರಮೇಶ್ ಕುಲಕರ್ಣಿ, ಪ್ರೊ: ಪಿ.ಎಸ್.ಐ. ಎಂ.ಎಂ. ಹಳ್ಳಿ ಪೊಲೀಸ್ ಠಾಣೆ, ಬಳ್ಳಾರಿ ಜಿಲ್ಲೆ, ರವರ ಖಾಯಂಪೂರ್ವ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ಪರಿವೀಕ್ಷಣೆ ನಿಯಮಗಳು 1977ರ ನಿಯಮ 4(1)(i) ರನ್ವಯ ದಿನಾಂಕ: 15.09.2007 ರಿಂದ 31.05.2009 ರವರೆಗೆ ವಿಸ್ತರಿಸುವಂತೆ ಡಿ.ಜಿ. ಮತ್ತು ಐ.ಜಿ.ಪಿ. ರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 75 ಪೊಸಇ 2008, ಬೆಂಗಳೂರು, ದಿನಾಂಕ: 23ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನ್) ನಿಯಮಾವಳಿಗಳು, 1977ರ ನಿಯಮ 4(1)(i) ರನ್ವಯ ಶ್ರೀ ರಮೇಶ್ ಕುಲಕರ್ಣಿ, ಪ್ರೊ: ಪಿ.ಎಸ್.ಐ. ಎಂ.ಎಂ. ಹಳ್ಳಿ ಪೊಲೀಸ್ ಠಾಣೆ, ಬಳ್ಳಾರಿ ಜಿಲ್ಲೆ ಇವರ ಖಾಯಂ ಪೂರ್ವ ಅವಧಿಯನ್ನು ದಿನಾಂಕ: 15.09.2007 ರಿಂದ 31.05.2009ರ ವರೆಗೆ ವಿಸ್ತರಿಸಿ ಆದೇಶಿಸಿದೆ.

ವಿಸ್ತರಿಸಿದ ಪರಿವೀಕ್ಷಣಾ ಅವಧಿಗೆ ಕ.ನಾ.ಸೇ. (ಪರಿವೀಕ್ಷಣೆ) ನಿಯಮಗಳು 1977ರ ನಿಯಮ 10ರ ಪ್ರಕಾರ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ಕಾಲ್ಪನಿಕವಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗದಿಪಡಿಸುವುದು. ಹೀಗೆ ನಿಗದಿಪಡಿಸಿದ ವೇತನದ ಬಾಕಿಯನ್ನು ನೀಡಲು ಅವಕಾಶವಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಪಿ.ಆರ್. 1813

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ. (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಕೆ.ಎ. ನಾರಾಯಣಸ್ವಾಮಿ, ದ್ವಿ.ದ.ಸ., ಡಿ.ಸಿ.ಪಿ ದಕ್ಷಿಣ ವಿಭಾಗ ರವರ ಕಚೇರಿ, ಬೆಂಗಳೂರು ನಗರ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ದೋಷಾರೋಪಣಾ ಪಟ್ಟಿ ದಿನಾಂಕ 22–01–2007.
2. ದೋಷಾರೋಪಣೆಗೆ ಸಮಜಾಯಿಷಿ ದಿನಾಂಕ 05–02–2007.
3. ಶಿಸ್ತು ಪ್ರಾಧಿಕಾರಿಯವರು ಹೊರಡಿಸಿದ ಅಂತಿಮ ಆದೇಶ ಸಂಖ್ಯೆ: ಡಿಇ.2/142/ಸಿಸಿಎ–12/2003–07, ಬೆಂಗಳೂರು ದಿನಾಂಕ 08–05–2007.
4. ಶ್ರೀ ಕೆ.ಎ. ನಾರಾಯಣಸ್ವಾಮಿ, ದ್ವಿದ.ಸ ರವರ ಮೇಲ್ಮನವಿ ಅರ್ಜಿ ದಿನಾಂಕ 24–07–2007.
5. ಮೇಲ್ಮನವಿ ಪ್ರಾಧಿಕಾರಗಳ ಆದೇಶ ದಿನಾಂಕ 24–05–2008.
6. ಪರಿಷ್ಕರಣ ಮೇಲ್ಮನವಿ ದಿನಾಂಕ 15–07–2008.

**ಪ್ರಸ್ತಾವನೆ:**

ಶ್ರೀ ಕೆ.ಎ. ನಾರಾಯಣಸ್ವಾಮಿ, ದ್ವಿದಸ ರವರು ಈ ಹಿಂದೆ ಡಿ.ಸಿ.ಪಿ ಪೂರ್ವ ವಿಭಾಗದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಈ ಕೆಳಕಂಡ ಆರೋಪಗಳನ್ನು ಎಸಗಿದ್ದು ಇವರ ವಿರುದ್ಧ ಕೆ.ಸಿ.ಎಸ್ (ಸಿ.ಸಿ.ಎ) ನಿಯಮಾವಳಿ, 1957ರ ನಿಯಮ 12ರನ್ವಯ ದೋಷಾರೋಪಣೆ ಪತ್ರವನ್ನು ಮೇಲೆ(1)ರಲ್ಲಿ ಓದಲಾದ ಪತ್ರದಲ್ಲಿ ಹೊರಡಿಸಲಾಗಿತ್ತು.

**ಆರೋಪಗಳು:**

1) ಇನ್‌ವಾಯ್ಸ್ ನಂ.276:99–2000 ದಿನಾಂಕ 2–2–2000 ರಲ್ಲಿ 20 ಹ್ಯಾವರ್ಸ್ ಸಾಕ್ಸ್‌ಗಳನ್ನು ಮತ್ತು 7.9 ಮೀಟರ್ ವಿತರಣೆ ಮಾಡಿರುವ ಬಗ್ಗೆ ಯಾವುದೇ ಮಾಹಿತಿ ಇರುವುದಿಲ್ಲ.
2) ಇನ್‌ವಾಯ್ಸ್ ನಂ.292:99:2000 ದಿನಾಂಕ 23–02–2000 ಮತ್ತು 297:2000 ದಿನಾಂಕ 1–3–2000, ಇದರಲ್ಲಿ ಸ್ವೀಕರಿಸಿದ 25 ಬಿಳಿ ಮಳೆ ಕವಚಗಳ ಪೈಕಿ 24ನ್ನು ವಿತರಿಸಿದ್ದು, ಒಂದನ್ನು ವಿತರಿಸಿರುವುದಿಲ್ಲ. ಹಾಗೂ 170 ಬೆಲ್ಟ್‌ಗಳ ಪೈಕಿ 154 ಬೆಲ್ಟ್‌ಗಳನ್ನು ವಿತರಿಸಿದ್ದು 16 ಬೆಲ್ಟ್‌ಗಳನ್ನು ವಿತರಿಸಿರುವ ಬಗ್ಗೆ ಯಾವುದೇ ಮಾಹಿತಿ ಇರುವುದಿಲ್ಲ.
3) ಇನ್‌ವಾಯ್ಸ್ ನಂ.297:99–2000 ರಲ್ಲಿ 1100 ಬಿ.ಸಿ.ಪಿ. ಬ್ಯಾಡ್ಜ್‌ಗಳ ಪೈಕಿ 1080 ಅನ್ನು ವಿತರಿಸಿದ್ದು 20 ಬಿ.ಸಿ.ಪಿ. ಬ್ಯಾಡ್ಜ್‌ಗಳನ್ನು ವಿತರಿಸದೇ ಬಾಕಿ ಇಟ್ಟಿರುವುದು ಮತ್ತು 200 ಬಾಕಿ ಟೈಗಳ ಪೈಕಿ 180 ನ್ನು ಮಾತ್ರ ವಿತರಿಸಿದ್ದು 20 ಅನ್ನು ವಿತರಿಸದೇ ಬಾಕಿ ಇಟ್ಟಿರುವುದು.
4) ಇನ್‌ವಾಯ್ಸ್ ನಂ.2:2000 ದಿನಾಂಕ 29–04–2000 ರಲ್ಲಿ 840 ರೈನ್‌ಕೋಟ್‌ಗಳ ಪೈಕಿ 835 ವಿತರಿಸಿದ್ದು 5 ವಿತರಿಸದೇ ಬಾಕಿ ಇಟ್ಟಿರುವುದು ಹಾಗೂ 1359 ಬಿಳಿ ಕೈ ಚೀಲಗಳ ಜೊತೆ ಹಿಂದಿನ ಬಾಕಿ ಇದ್ದವು ಸೇವೆ 3801 ಆಗಿದ್ದು ಅವುಗಳ ಪೈಕಿ 3835 ಬಿಳಿ ಕೈ ಚೀಲಗಲನ್ನು ವಿತರಿಸಿದ್ದು ಹೆಚ್ಚಿಗೆ ವಿರಿಸಿರುವ 34 ಜೊತೆ ಬಿಳಿ ಕೈ ಚೀಲಗಳು ಎಲ್ಲಿಂದ ಬಂದಿದೆ ಎಂಬ ಬಗ್ಗೆ ವಿವರ ಇರುವುದಿಲ್ಲ.
5) ಇನ್‌ವಾಯ್ಸ್ ನಂ.191/01, ದಿನಾಂಕ 18–07–2001 ರಲ್ಲಿ 1900 ಬಿಳಿ ಟೋಪಿಗಳಲ್ಲಿ 1871 ವಿತರಿಸಿದ್ದು ಉಳಿದ 29 ಟೋಪಿಗಳನ್ನು ವಿತರಿಸದೇ ಇರುವ ಬಗ್ಗೆ ಮಾಹಿತಿ ಇರುವುದಿಲ್ಲ. ಹಾಗೂ 5000 ಬಟನ್‌ಗಳ ಪೈಕಿ 4535 ಬಟನ್‌ಗಳನ್ನು ವಿತರಿಸಿದ್ದು 465 ಬಟನ್‌ಗಳನ್ನು ವಿತರಿಸಿರುವ ಬಗ್ಗೆ ಮಾಹಿತಿ ಇರುವುದಿಲ್ಲ.

6) ಇನ್‌ವಾಯ್ಸ್ ನಂ.345:2002 ದಿನಾಂಕ 18–04–2002 ರಲ್ಲಿ 160 ಕೆಂಪು ಚವರಿನ್‌ಗಳ ಪೈಕಿ 150 ಅನ್ನು ವಿತರಿಸಿದ್ದು 10 ಕೆಂಪು ಜವರಿನ್‌ಗಳನ್ನು ವಿತರಿಸಿರುವುದಿಲ್ಲ.

7) ಇನ್‌ವಾಯ್ಸ್ ನಂ.419:2002 ದಿನಾಂಕ 05–09–2002 ರಲ್ಲಿ 470 ಬಿಳಿ ಸ್ಲೋಚ್ ಹ್ಯಾಟ್‌ಗಳನ್ನು ಸ್ವೀಕರಿಸಿದ್ದು 20 ಸ್ಲೋಚ್ ಹ್ಯಾಟ್‌ಗಳನ್ನು ವಿತರಿಸಿರುವ ಬಗ್ಗೆ ಯಾವುದೇ ಮಾಹಿತಿ ಇರುವುದಿಲ್ಲ.

ಶ್ರೀ ಕೆ.ಎ. ನಾರಾಯಣಸ್ವಾಮಿ, ದ್ವಿ.ದ.ಸ. ಇವರು ದೋಷಾರೋಪಣಾ ಪತ್ರವನ್ನು ಸ್ವೀಕರಿಸಿ ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಸಮಜಾಯಿಷಿಯನ್ನು ಸಲ್ಲಿಸಿರುತ್ತಾರೆ. ಸಮಜಾಯಿಷಿ ಸಮಂಜಸವಾಗಿಲ್ಲದ ಕಾರಣ ಶಿಸ್ತು ಪ್ರಾಧಿಕಾರವು ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ದಿನಾಂಕ 08–05–2007ರಲ್ಲಿ ಈ ಕೆಳಕಂಡಂತೆ ದಂಡನೆಯನ್ನು ವಿಧಿಸಿರುತ್ತದೆ.

"ಶ್ರೀ ಕೆ.ಎ. ನಾರಾಯಣಸ್ವಾಮಿ, ದ್ವಿ.ದ.ಸ. ಸಂಚಾರ (ಪೂರ್ವ) ರವರ ಕಛೇರಿ, (ಹಾಲಿ ಉಪ ಪೊಲೀಸ್ ಕಮೀಷನರ್, ದಕ್ಷಿಣ ವಿಭಾಗ) ಬೆಂಗಳೂರು ನಗರ ರವರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವೇತನ ಬಡ್ತಿಗೆ ಧಕ್ಕೆಯಾಗದಂತೆ ಒಂದು ವರ್ಷಗಳ ಕಾಲ ಮುಂದೂಡಲಾಗಿದೆ. ದಿನಾಂಕ 07–05–2003 ರಿಂದ 08–01–2004 ರವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತಿನ ಅವಧಿಯೆಂದೇ ಪರಿಗಣಿಸಲಾಗಿದೆ"

ಶಿಸ್ತು ಪ್ರಾಧಿಕಾರದ ಆದೇಶದ ವಿರುದ್ಧ ಮೇಲ್ಮನವಿ ಪ್ರಾಧಿಕಾರಿಯವರಿಗೆ ದಿನಾಂಕ 24–07–2007 ರಂದು ಮೇಲ್ಮನವಿ ಅರ್ಜಿ ಸಲ್ಲಿಸಿರುತ್ತಾರೆ. ಅರ್ಜಿಯನ್ನು ಮೇಲ್ಮನವಿ ಪ್ರಾಧಿಕಾರವು ಪರಿಶೀಲಿಸಿ ದಿನಾಂಕ 24–05–2008 ರಂದು ತಿರಸ್ಕರಿಸಿರುತ್ತದೆ.

ತದನಂತರ ಈ ಎರಡು ಆದೇಶಗಳ ವಿರುದ್ಧ ಪರಿಷ್ಕರಣ ಮೇಲ್ಮನವಿಯನ್ನು ಮೇಲೆ ಓದಲಾದ (6)ರಲ್ಲಿ ಸರ್ಕಾರಕ್ಕೆ ದಿನಾಂಕ 15–07–2008ರಂದು ಸಲ್ಲಿಸಲಾಗಿರುತ್ತದೆ.

ಪರಿಷ್ಕರಣ ಮೇಲ್ಮನವಿಯ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿ ಪರಿಷ್ಕರಣ ಮೇಲ್ಮನವಿಯಲ್ಲಿ ಯಾವುದೇ ಹೊಸ ಸಮರ್ಥನೀಯ ಅಂಶಗಳು ಇರುವುದಿಲ್ಲ. ಸದರಿಯವರು ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನಾದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 72 ಪೊಸಿಲಿ 2008, ಬೆಂಗಳೂರು, ದಿನಾಂಕ: 18ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಕೆ.ಎ. ನಾರಾಯಣಸ್ವಾಮಿ, ದ್ವಿ.ದ.ಸ., ಡಿ.ಸಿ.ಪಿ ದಕ್ಷಿಣ ವಿಭಾಗ ರವರ ಕಚೇರಿ, ಬೆಂಗಳೂರು ನಗರ ರವರು ಸರ್ಕಾರಕ್ಕೆ ಸಲ್ಲಿಸಿದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 26(ಎ) ರ ಪ್ರಕಾರ ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1814

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀಮತಿ ಚಂದ್ರಭಾಗ, ದ್ವಿ.ದ.ಸ. ಜಿಲ್ಲಾ ಪೊಲೀಸ್ ಕಛೇರಿ, ಗುಲ್ಬರ್ಗಾ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಜಿಲ್ಲಾ ಪೊಲೀಸ್ ಸೂಪರಿಂಟೆಂಡೆಂಟ್, ಗುಲಬರ್ಗಾ ರವರ ನಡವಳಿ ಸಂಖ್ಯೆ:ಪಿ.ಆರ್.198/2007 ಡಿ.ಓ.ಡಿ. ಸಂಖ್ಯೆ:2093:07 ದಿನಾಂಕ 05–11–2007.
2. ಮೇಲ್ಮನವಿ ಆದೇಶ ಸಂಖ್ಯೆ:ಅಪೀಲು/110/ಈವ/2007 ದಿನಾಂಕ 26–02–2008.
3. ಪರಿಷ್ಕರಣ ಮೇಲ್ಮನವಿ ದಿನಾಂಕ 01–10–2008.
4. ಪೊಲೀಸ್ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ರವರ ಕಚೇರಿ ಪತ್ರ ಸಂಖ್ಯೆ: ಅಪೀಲು(2)105/2008–09 ದಿನಾಂಕ 23–05–2009.

**ಪ್ರಸ್ತಾವನೆ:**

ಶ್ರೀಮತಿ ಚಂದ್ರಭಾಗ, ದ್ವಿ.ದ.ಸ. ಜಿಲ್ಲಾ ಪೊಲೀಸ್ ಕಛೇರಿ, ಗುಲ್ಬರ್ಗಾ ರವರು ದಿನಾಂಕ 23–07–2007 ರಿಂದ 26–09–2007 ರವರೆಗೆ 66 ದಿವಸ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುತ್ತಾರೆ. ಇವರು ಶಿಸ್ತಿನ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿದ್ದು, ಯಾವುದೇ ರಜೆ ಅರ್ಜಿ ಸಲ್ಲಿಸದೆ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿ ಕಾರ್ಯ ವಿಮುಖತೆ ಹಾಗೂ ನಿರ್ಲಕ್ಷತನ ತೋರಿಸಿದ್ದರಿಂದ ಕೆ.ಸಿ.ಎಸ್. (ಸಿಸಿಎ) ನಿಯಮಾವಳಿ, 1957ರ ನಿಯಮ 12ರ ಪ್ರಕಾರ ಶಿಸ್ತು ಕ್ರಮ ಜರುಗಿಸಲಾಗಿರುತ್ತದೆ. ನಂತರ ಸದರಿಯವರ ಸಮಜಾಯಿಷಿಯಲ್ಲಿ ಅನಾರೋಗ್ಯದ ಕಾರಣ ಗೈರು ಹಾಜರಾದ ಬಗ್ಗೆ ತಿಳಿಸಲಾಗಿರುತ್ತದೆ. ಇವರು ಸಲ್ಲಿಸಿದ ಸಮಜಾಯಿಷಿ ಸಮಂಜಸವಾಗಿರುವುದಿಲ್ಲವೆಂದು ಶಿಸ್ತು ಪ್ರಾಧಿಕಾರವು ಮೇಲೆ ಓದಲಾದ

(1)ರ ಆದೇಶದಲ್ಲಿ ಸದರಿಯವರ ವಾರ್ಷಿಕ ವೇತನ ಮುಂಬಡ್ತಿಯನ್ನು ಎರಡು (2) ತಿಂಗಳ ಕಾಲ ಮುಂದಿನ ವಾರ್ಷಿಕ ವೇತನ ಮುಂಬಡ್ತಿಯ ಮೇಲೆ ಪರಿಣಾಮ ಬೀರದಂತೆ ಮುಂದೂಡಿರುತ್ತದೆ. ದಿನಾಂಕ 23–07–2007 ರಿಂದ 26–09–2007 ರವರೆಗೆ (66) ದಿವಸ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾದ ಅವಧಿಯನ್ನು ವೇತನ ರಹಿತ ರಜೆ ಎಂದು ಪರಿಗಣಿಸಲಾಗಿರುತ್ತದೆ.

ಶಿಸ್ತು ಪ್ರಾಧಿಕಾರದ ಆದೇಶದ ವಿರುದ್ದ ಮೇಲ್ಮನವಿ ಪ್ರಾಧಿಕಾರಕ್ಕೆ ಸದರಿಯವರು ಮನವಿ ಸಲ್ಲಿಸಿದ್ದು, ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಮೇಲ್ಮನವಿ ಪ್ರಾಧಿಕಾರವು ಅವರ ಮನವಿಯನ್ನು ತಿರಸ್ಕರಿಸಿರುತ್ತದೆ.

ತದನಂತರ ಸದರಿಯವರು ಮೇಲಿನ ಆದೇಶಗಳ ವಿರುದ್ಧ ಸರ್ಕಾರಕ್ಕೆ ಮೇಲೆ ಓದಲಾದ (3)ರಲ್ಲಿ ಮೇಲ್ಮನವಿಯನ್ನು ಸಲ್ಲಿಸಿದ್ದು, ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಯಾವುದೇ ಹೊಸ ಸಮರ್ಥನೀಯ ಅಂಶಗಳು ಕಂಡು ಬರುತ್ತಿಲ್ಲವಾದ ಕಾರಣ, ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ಈಗಾಗಲೇ ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 1 ಪೊಸಿಲಿ 2008, ಬೆಂಗಳೂರು, ದಿನಾಂಕ: 27ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಕಾರಣಗಳ ಹಿನ್ನೆಲೆಯಲ್ಲಿ ಶ್ರೀಮತಿ ಚಂದ್ರಭಾಗ, ದ್ವಿದ.ಸ. ಜಿಲ್ಲಾ ಪೊಲೀಸ್ ಕಛೇರಿ, ಗುಲ್ಬರ್ಗಾ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 26(ಎ) ಪ್ರಕಾರ ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1815

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ಶಿಕ್ಷಣ ಸಚಿವಾಲಯ**

**ವಿಷಯ:** ಡಿಪ್ಲೋಮಾಧಾರಕರಿಗೆ 2ನೇ ವರ್ಷ 3ನೇ ಸೆಮಿಸ್ಟರ್ ಬಿಇ:ಬಿ.ಟೆಕ್ ಕೋರ್ಸಿಗೆ ಶೇ 15ರಷ್ಟು ಸೀಟುಗಳನ್ನು ನಿಗದಿಪಡಿಸುವ ಕುರಿತು.

**ಓದಲಾಗಿದೆ:**
1. ದಿನಾಂಕ: 15.6.1992ರ ನವದೆಹಲಿಯ ಎಐಸಿಟಿಇಯ ಮಾರ್ಗಸೂಚಿಗಳು.
2. ಸರ್ಕಾರದ ಆದೇಶ ಸಂಖ್ಯೆ: ಇಡಿ 27 ಟಿಜಿಎಲ್ 96 ದಿನಾಂಕ: 22.9.2001.
3. ಸರ್ಕಾರದ ಆದೇಶ ಸಂಖ್ಯೆ: ಇಡಿ 91 ಟಿಇಸಿ 2002 ದಿನಾಂಕ: 11.12.2002.
4. ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಇವರ ಪತ್ರ ಸಂಖ್ಯೆ: ಡಿಟಿಇ 12 ಎಸಿಎಂ (1) 2009 ದಿನಾಂಕ: 25.07.2009.

**ಪ್ರಸ್ತಾವನೆ:**

ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ ಎಐಸಿಟಿಇ ಮಾರ್ಗಸೂಚಿಯನ್ವಯ ಕರ್ನಾಟಕ ರಾಜ್ಯದ ಡಿಪ್ಲೊಮಾ ವಿದ್ಯಾರ್ಥಿಗಳಿಗೆ ಮೂರನೇ ಸೆಮಿಸ್ಟರ್ ಇಂಜಿನಿಯರಿಂಗ್‌ಗೆ ನೇರವಾಗಿ ಪ್ರವೇಶ ಪಡೆಯಲು ಪ್ರಥಮ ವರ್ಷಕ್ಕೆ ನಿಗದಿಪಡಿಸಿರುವ ಇಂಟೇಕ್‌ಗೆ ಶೇ 5ರಷ್ಟು ಸ್ಥಾನಗಳನ್ನು ಹೆಚ್ಚುವರಿಯಾಗಿ 2001–02ನೇ ಸಾಲಿನಿಂದ ಅನ್ವಯವಾಗುವಂತೆ ಕಾದಿರಿಸಲಾಗಿತ್ತು. ನಂತರ ಡಿಪ್ಲೊಮಾ ಪ್ರವೇಶದಲ್ಲಿ ಗಣನೀಯವಾಗಿ ಏರಿಕೆಯಾಗಿ ಇಂಜಿನಿಯರಿಂಗ್ ಪ್ರವೇಶಕ್ಕೂ ಅಷ್ಟೇ ಪ್ರಮಾಣದಲ್ಲಿ ಬೇಡಿಕೆ ಹೆಚ್ಚಾದ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ಇಡಿ 91, ಟಿಇಸಿ 2002, ದಿನಾಂಕ:11.12.2002 ರಲ್ಲಿ 2002–03ನೇ ಸಾಲಿನಿಂದ ಜಾರಿಗೆ ಬರುವಂತೆ ಶೇ.5 ರಿಂದ ಶೇ. 10ಕ್ಕೆ ಹೆಚ್ಚಿಸಲಾಗಿತ್ತು.

2002–03ನೇ ಸಾಲಿನಲ್ಲಿದ್ದ ಪಾಲಿಟೆಕ್ನಿಕ್‌ಗಳ ಸಂಖ್ಯೆ ಮತ್ತು ಡಿಪ್ಲೊಮಾ ವಿದ್ಯಾರ್ಥಿಗಳ ಉತ್ತೀರ್ಣತೆಯ ಪ್ರಮಾಣ ಹಾಗೂ ತೃತೀಯ ಸೆಮಿಸ್ಟರ್ ಬಿ.ಇ. ಪ್ರವೇಶಕ್ಕೆ ನೋಂದಣಿ ಸಂಖ್ಯೆಯ ಪ್ರಮಾಣ ಗಣನೀಯವಾಗಿ ಏರಿಕೆಯಾಗುತ್ತಿರುವ ಹಿನ್ನೆಲೆಯಲ್ಲಿ ಪ್ರಸ್ತುತ ಕಾದಿರಿಸಿರುವ ಶೇ. 10ರ ಸ್ಥಾನಗಳ ಲಭ್ಯತೆಗಿಂತ ಡಿಪ್ಲೊಮಾಧಾರಕರ ಬೇಡಿಕೆ ಹೆಚ್ಚಾಗಿರುವುದರಿಂದ ಅರ್ಹ ಡಿಪ್ಲೊಮಾ ವಿದ್ಯಾರ್ಥಿಗಳಿಗೆ ಪ್ರವೇಶ ದೊರಕದೆ ಇಂಜಿನಿಯರಿಂಗ್ ಪ್ರವೇಶದಿಂದ ವಂಚಿತರಾಗುತ್ತಿದ್ದಾರೆ. ಆದುದರಿಂದ ಡಿಪ್ಲೊಮಾಧಾರಕರ ಮುಂದಿನ ಶೈಕ್ಷಣಿಕ ಹಿತದೃಷ್ಟಿಯಿಂದ ಡಿಪ್ಲೊಮಾಧಾರಕರಿಗೆ ತೃತೀಯ ಸೆಮಿಸ್ಟರ್ ಪ್ರವೇಶಕ್ಕೆ ಪ್ರಸ್ತುತ ನಿಗದಿಪಡಿಸಿರುವ ಸ್ಥಾನಗಳನ್ನು ಶೇ. 10 ರಿಂದ ಶೇ. 20ಕ್ಕೆ ಹೆಚ್ಚಿಸಿ ಪರಿಷ್ಕೃತ ಸರ್ಕಾರದ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 108 ಟಿಇಸಿ 2009, ಬೆಂಗಳೂರು, ದಿನಾಂಕ: 31ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ರಾಜ್ಯದಲ್ಲಿನ ಡಿಪ್ಲೊಮಾಧಾರಕರುಗಳಿಗೆ ಬಿ.ಇ/ಬಿ.ಟೆಕ್ ಕೋರ್ಸುಗಳ 2ನೇ ವರ್ಷದ ಮೂರನೇ ಸೆಮಿಸ್ಟರ್‌ಗೆ ಪ್ರಸ್ತುತ ಶೇಕಡ 10 ರಷ್ಟು ಸೀಟುಗಳನ್ನು ನಿಗದಿಪಡಿಸಿರುವುದನ್ನು 2009–10ನೇ ಶೈಕ್ಷಣಿಕ ಸಾಲಿನಿಂದ ಜಾರಿಗೆ ಬರುವಂತೆ ಶೇ. 15ಕ್ಕೆ ಹೆಚ್ಚಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1817

**ಎನ್.ಆರ್. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ)

**ವಿಷಯ:** ಮಂಡ್ಯ ಕೃಷಿಕ ಸರ್ವೋದಯ ಟ್ರಸ್ಟ್ (ರಿ) ವಸತಿ ನಿಲಯ ಕಟ್ಟಡ ಕಾಮಗಾರಿಗಾಗಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಅಧ್ಯಕ್ಷರು, ಮಂಡ್ಯ, ಕೃಷಿಕ ಸರ್ವೋದಯ ಟ್ರಸ್ಟ್ (ರಿ), ಪಿ.ಇ.ಎಸ್. ವಿಜ್ಞಾನ ಕಾಲೇಜಿನ ಆವರಣ, ಎಂ.ಜಿ. ರಸ್ತೆ, ಮಂಡ್ಯ, ಇವರು ದಿನಾಂಕ 17.10.2008 ರಂದು ಮಾನ್ಯ ಮುಖ್ಯಮಂತ್ರಿಯವರಿಗೆ ಸಲ್ಲಿಸಿರುವ ಮನವಿ ಬಗ್ಗೆ.
2. ಸರ್ಕಾರದ ಆದೇಶ ಸಂಖ್ಯೆ ಇಡಿ 138 ಯೋಯೋಕ 2007 ದಿನಾಂಕ: 3.7.2007

**ಪ್ರಸ್ತಾವನೆ:**

ಮಂಡ್ಯ ಕೃಷಿಕ ಸರ್ವೋದಯ ಟ್ರಸ್ಟ್ (ರಿ) ಮಂಡ್ಯ ನಗರದ ಕಾರಸವಾಡಿ ರಸ್ತೆ – ಹೊಸಹಳ್ಳಿ ಹೌಸಿಂಗ್ ಬೋರ್ಡ್ ಬಡಾವಣೆಯಲ್ಲಿ ವಿವಿಧ ಸ್ಪರ್ಧಾತ್ಮಕ ಪರೀಕ್ಷೆಗಳ ತರಬೇತಿಗಾಗಿ ಬರುವ ಉದ್ಯೋಗಾಕಾಂಕ್ಷಿ ಪುರುಷ ಹಾಗೂ ಮಹಿಳಾ ಅಭ್ಯರ್ಥಿಗಳ ವಸತಿ ನಿಲಯ ಕಟ್ಟಡ ನಿರ್ಮಾಣಕ್ಕಾಗಿ ಅನುದಾನ ಒದಗಿಸುವಂತೆ ಕೋರಿರುವರು.

ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ಲೆಕ್ಕ ಶೀರ್ಷಿಕ "2203–00–104–0–01–101" ಸರ್ಕಾರೇತರ ತಾಂತ್ರಿಕ ಶಾಲೆಗಳು, ಸಹಾಯಾನುದಾನ (ಯೋಜನೇತರ) ಅಡಿಯಲ್ಲಿ ರೂ. 75.00 ಲಕ್ಷಗಳನ್ನು ಈಗಾಗಲೇ ಬಿಡುಗಡೆ ಮಾಡಲಾಗಿದೆ. ಅವರ ಮನವಿಯನ್ನು ಪರಿಶೀಲಿಸಿದ ಸರ್ಕಾರವು ಸದರಿ ಟ್ರಸ್ಟ್‌ಗೆ ಈ ಹಿಂದೆ ರೂ. 50.00 ಲಕ್ಷಗಳನ್ನು ಬಿಡುಗಡೆ ಮಾಡಿದ್ದು, ಈಗ ಪುನ: ರೂ. 50.00 ಲಕ್ಷ ಬಿಡುಗಡೆ ಮಾಡಲು ಕೋರಿರುವುದರಿಂದ ಈ ಅನುದಾನವನ್ನು ಮುಂದುವರೆದ ಯೋಜನೆಯ ಪಟ್ಟಿಯಲ್ಲಿ ಸೇರಿಸಿ ಒದಗಿಸಲು ಉದ್ದೇಶಿಸಿರುವುದರಿಂದ ಮುಂದೆ ಈ ಸಂಸ್ಥೆಗೆ ಯಾವುದೇ ರೀತಿಯ ಅನುದಾನ ನೀಡುವುದಕ್ಕೆ ಸಾಧ್ಯವಾಗುವುದಿಲ್ಲ ಮತ್ತು ಸದರಿ ಸಂಸ್ಥೆಯು ಯಾವುದೇ ಅನುದಾನ ಕೋರಿ ಮನವಿ ಸಲ್ಲಿಸಬಾರದು ಎಂಬ ಷರತ್ತು ವಿಧಿಸಿ ಕೊನೆಯ ಬಾರಿಗೆ ರೂ. 50.00 ಲಕ್ಷ (ಐವತ್ತು ಲಕ್ಷ ರೂಪಾಯಿಗಳು ಮಾತ್ರ) ಮಂಜೂರು ಮಾಡಲು ತೀರ್ಮಾನಿಸಲಾಗಿದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 265 ಯೋಯೋಕ 2008, ಬೆಂಗಳೂರು, ದಿನಾಂಕ: 30ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಮಂಡ್ಯ ಕೃಷಿಕ ಸರ್ವೋದಯ ಫೌಂಡೇಶನ್ ಟ್ರಸ್ಟ್ (ರಿ), ಮಂಡ್ಯ ಇವರು ಮಂಡ್ಯ ನಗರದಲ್ಲಿ ವಿವಿಧ ಸ್ಪರ್ಧಾತ್ಮಕ ಪರೀಕ್ಷೆಗಳ ತರಬೇತಿಗಾಗಿ ಬರುವ ಉದ್ಯೋಗಾಕಾಂಕ್ಷಿಗಳಿಗೆ ವಸತಿನಿಲಯ ಕಟ್ಟಡ ನಿರ್ಮಾಣಕ್ಕಾಗಿ ಅಂತಿಮ ಕಂತಾಗಿ ರೂ. 50.00 ಲಕ್ಷಗಳನ್ನು (ಐವತ್ತು ಲಕ್ಷ ರೂಪಾಯಿಗಳು ಮಾತ್ರ) ಲೆಕ್ಕ ಶೀರ್ಷಿಕ "2203–00–104–0–01–101" ಸರ್ಕಾರೇತರ ತಾಂತ್ರಿಕ ಶಾಲೆಗಳು ಸಹಾಯಾನುದಾನ (ಯೋಜನೇತರ) ಅಡಿಯಲ್ಲಿ ಒದಗಿಸಿರುವ ಅನುದಾನದಲ್ಲಿ ಇವರಿಗೆ ವಿಶೇಷ ಪ್ರಕರಣವೆಂದು ಪರಿಗಣಿಸಿ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರಿಗೆ ಈ ಕೆಳಕಂಡ ಷರತ್ತಿನೊಂದಿಗೆ ಅನುಮತಿ ನೀಡಲಾಗಿದೆ.

(1) ಸರ್ಕಾರವು ಇನ್ನು ಮುಂದೆ ಈ ಸಂಸ್ಥೆಗೆ ಯಾವುದೇ ರೀತಿಯ ಅನುದಾನ ನೀಡಲು ಸಾಧ್ಯವಾಗುವುದಿಲ್ಲ.

(2) ಅನುದಾನ ಬಳಕೆಯ ಬಗ್ಗೆ ಪ್ರಮಾಣ ಪತ್ರವನ್ನು ಸಂಸ್ಥೆಯಿಂದ ಪಡೆದು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಈ ಅದೇಶವನ್ನು ದಿನಾಂಕ 18.7.2009ರ ಸಂಖ್ಯೆ ಆಇ 989 ವೆಚ್ಚ–8/09ರ ಆರ್ಥಿಕ ಇಲಾಖೆಯು ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1818

**ಎಸ್.ಎಂ. ನಂದಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಯೋಜನೆ)

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಬೆಂಗಳೂರಿನ ಕೇಂದ್ರ ಪರಿಹಾರ ಸಮಿತಿಗೆ ಸೇರಿದ ಭೂಮಿಯ ವರ್ಗಾವಣೆ ಮತ್ತು ಅಭಿವೃದ್ಧಿಗೊಳಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಅದೇಶ ಸಂಖ್ಯೆ : ಸಕಇ 18 ಎಸ್‌ಬಿಆರ್ 77 ದಿನಾಂಕ: 5.12.1977.
2) ಸರ್ಕಾರಿ ಅದೇಶ ಸಂಖ್ಯೆ : ಸಕಇ 38 ಎಸ್‌ಬಿಆರ್ 2007, ದಿನಾಂಕ: 8.10.2007.

**ಪ್ರಸ್ತಾವನೆ:**

ಬೆಂಗಳೂರಿನ ಕೇಂದ್ರ ಪರಿಹಾರ ಸಮಿತಿಯ ಸ್ವಾಧೀನದಲ್ಲಿದ್ದ ಒಟ್ಟು 308.02 ಎಕರೆ ವಿಸ್ತೀರ್ಣದ ಭೂಮಿಯಲ್ಲಿ ಕೆಲವೊಂದು ಭೂಮಿಯನ್ನು ಸರ್ಕಾರದ ವಿವಿಧ ನಿಗಮ:ಮಂಡಳಿ:ಸಂಸ್ಥೆಗಳಿಗೆ ವರ್ಗಾವಣೆ:ಲೀಸ್ ಆಧಾರ ನೀಡಲಾಗಿತ್ತು. ಈ ಮಧ್ಯೆ ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಸುಮನಹಳ್ಳಿ ಕುಷ್ಠರೋಗಿಗಳ ಪುನರ್ವಸತಿ ಕೇಂದ್ರಕ್ಕೆ ನೀಡಲಾದ 63.02 ಎಕರೆ ವಿಸ್ತೀರ್ಣದ ಭೂಮಿಯ ಲೀಸ್ ಅವಧಿಯು 2007ನೇ ಸಾಲಿನಲ್ಲಿ ಮುಗಿದಿರುತ್ತದೆ. ಈ ಜಮೀನಿನಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ವತಿಯಿಂದ ರಸ್ತೆ ಮಾಡುವ ಸಲುವಾಗಿ 7.17 ಎಕರೆ ಭೂಮಿ ವಿಸ್ತೀರ್ಣದ ಭೂಮಿ ನೀಡಲಾಗಿದೆ. ಈಗ ಉಳಿದಿರುವ 55.25 ಎಕರೆ ವಿಸ್ತೀರ್ಣದ ಭೂಮಿಯ ಜೊತೆಗೆ ಶ್ರೀಗಂಧದಕಾವಲು ಗ್ರಾಮದಲ್ಲಿ 166.30 ಎಕರೆ ವಿಸ್ತೀರ್ಣದ ಜಮೀನು ಕೇಂದ್ರ ಪರಿಹಾರ ಸಮಿತಿಗೆ ಸೇರಿರುತ್ತದೆ.

ಸುಮನಹಳ್ಳಿ ಕುಷ್ಠರೋಗಿಗಳ ಪುನರ್ವಸತಿ ಕೇಂದ್ರಕ್ಕೆ ಲೀಸ್ ಆಧಾರದ ಮೇಲೆ ನೀಡಲಾಗಿದ್ದ ಭೂಮಿಯನ್ನು ಮೇಲ್ಕಂಡ ಕೇಂದ್ರ ಹಾಗೂ ಸಮಾಜ ಕಲ್ಯಾಣ ಸಚಿವಾಲಯದ ವ್ಯಾಪ್ತಿಗೆ ಬರುವ ವಿವಿಧ ಕ್ಷೇತ್ರ ಇಲಾಖೆ/ನಿಗಮಗಳಿಗೆ ಹಂಚಿಕೆ ಮಾಡುವುದರ ಜೊತೆಗೆ ಕೇಂದ್ರ ಪರಿಹಾರ ಸಮಿತಿಯ ಇತರೆ ಭೂಮಿಯನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಸಾರ್ವಜನಿಕ ಉಪಯೋಗಗಳಿಗೆ ಅಂದರೆ ಸಾರ್ವಜನಿಕ ಆಸ್ಪತ್ರೆ, ಕನ್ವೆಂಷನ್ ಸೆಂಟರ್ ಹಾಗೂ ಉದ್ಯಾನವನ ನಿರ್ಮಿಸಲು ಸರ್ಕಾರ ನಿರ್ಧರಿಸಿದೆ.

ಆ ಹಿನ್ನೆಲೆಯಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಕಇ 33 ಎಸ್.ಬಿ.ಆರ್. 2004, ಬೆಂಗಳೂರು, ದಿನಾಂಕ: 27ನೇ ಜುಲೈ 2009**

ಕೇಂದ್ರ ಪರಿಹಾರ ಸಮಿತಿಗೆ ಸೇರಿದ ಎಲ್ಲಾ ಭೂಮಿಗೆ ಸಂಬಂಧಿಸಿದ ವಿವಿಧ ವಿಷಯಗಳನ್ನು ಪರಿಶೀಲಿಸಿ ಕ್ರಮ ಜರುಗಿಸಲು ಈ ಹಿಂದೆ ಸರ್ಕಾರದ ಆದೇಶ ಸಂಖ್ಯೆ ಸಕಇ 38 ಎಸ್‌ಬಿಆರ್ 2007, ದಿನಾಂಕ 8.10.2007 ರಲ್ಲಿ ರಚಿಸಲಾದ ಸಮಿತಿಯನ್ನು ಉನ್ನತ ಮಟ್ಟದ ಅಧಿಕಾರಯುಕ್ತ ಸಮಿತಿಯನ್ನಾಗಿ ಮಾರ್ಪಡಿಸಿ ಸರ್ಕಾರದ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಈ ಕೆಳಗಿನಂತೆ ಪುನರ್ ರಚಿಸಲಾಗಿದೆ.

1) ಸರ್ಕಾರದ ಮುಖ್ಯ ಕಾರ್ಯದರ್ಶಿ – ಅಧ್ಯಕ್ಷರು
2) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ – ಸದಸ್ಯರು
3) ಸರ್ಕಾರದ ಪ್ರಧಾನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ – ಸದಸ್ಯರು
4) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ – ಸದಸ್ಯರು
5) ಆಯುಕ್ತರು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ – ಸದಸ್ಯರು
6) ಸರ್ಕಾರದ ಕಾರ್ಯದರ್ಶಿ ಸಮಾಜ ಕಲ್ಯಾಣ ಇಲಾಖೆ – ಸದಸ್ಯರು
7) ಕಾರ್ಯದರ್ಶಿ, ಕೇಂದ್ರ ಪರಿಹಾರ ಸಮಿತಿ ಬೆಂಗಳೂರು. – ಸದಸ್ಯ ಕಾರ್ಯದರ್ಶಿ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ರಾಮಸ್ವಾಮಿ**

ಪಿ.ಆರ್. 1820

ಸರ್ಕಾರದ ಅಧೀನ ಕಾರ್ಯದರ್ಶಿ–2 (ಪ್ರ),
ಸಮಾಜ ಕಲ್ಯಾಣ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ:ಮಹಮದ್ ಅಫ್ತಾಬ್ ವಾಸೀಂ, ವೈದ್ಯರು ದರ್ಜೆ–2(ಹೋ) ಸರ್ಕಾರಿ ಹೋಮಿಯೋಪತಿ ಚಿಕಿತ್ಸಾಲಯ, ಶಾಸಕರ ಭವನ, ಬೆಂಗಳೂರು ಇವರ ವಿರುದ್ಧ ಇಲಾಖಾ ವಿಚಾರಣೆಯಲ್ಲಿ ಡಿನೋವಾ ವಿಚಾರಣೆ ನಡೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಆಕುಕ 442 ಪಿಐಎಂ 2007 ದಿನಾಂಕ: 30–01–2008
2) ವಿಚಾರಣಾಧಿಕಾರಿಯವರ ವಿಚಾರಣಾ ವರದಿ ದಿನಾಂಕ:16–7–2008

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ.(1) ರಲ್ಲಿನ ಸರ್ಕಾರದ ಆದೇಶದಲ್ಲಿ ಡಾ: ಮಹಮದ್ ಅಫ್ತಾಬ್ ವಾಸೀಂ, ವೈದ್ಯರು ದರ್ಜೆ–2 (ಹೋ), ಸರ್ಕಾರಿ ಹೋಮಿಯೋಪತಿ ಚಿಕಿತ್ಸಾಲಯ, ಶಾಸಕರ ಭವನ, ಬೆಂಗಳೂರು ಇವರ ವಿರುದ್ಧ ಕರ್ನಾಟಕ ಹೋಮಿಯೋಪತಿ ಮಂಡಳಿಯಲ್ಲಿ ನಿಯೋಜನೆಯ ಮೇಲೆ ನೋಂದಣಾಧಿಕಾರಿಯಾಗಿ 11/1998 ರಿಂದ 05/2003 ರವರೆಗೆ ಕೆಲಸ ನಿರ್ವಹಿಸಿದ್ದ ಅವಧಿಯಲ್ಲಿ 1961 ರ ಹೋಮಿಯೋಪತಿ ಆಕ್ಟ್ ಅಂಡ್ ರೂಲ್ಸ್ ಅನುಚ್ಛೇದ 15 ಮತ್ತು 36 ರ ಅನುಸಾರ ಸೂಕ್ತ ನಿಯಮಗಳನ್ನು ರಚಿಸಿಕೊಳ್ಳದೇ, ಸರ್ಕಾರದಿಂದ ಪೂರ್ವಾನುಮತಿ ಹಾಗೂ ಮಂಜೂರಾತಿ ಪಡೆಯದೇ ಆರ್ಥಿಕವಾಗಿ ಕೆಲವು ಅಧಿಕಾರ ದುರುಪಯೋಗ ಹಾಗೂ ಮಂಡಳಿಗೆ ನಷ್ಟ ಉಂಟು ಮಾಡಿ ಕರ್ತವ್ಯ ಲೋಪವೆಸಗಿ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ, 1966 ರ ನಿಯಮ 3(1)(11) ನ್ನು ಉಲ್ಲಂಘಿಸಿರುವ ಬಗ್ಗೆ ವಿಚಾರಣೆ ನಡೆಸಲು ನಿವೃತ್ತ ಜಿಲ್ಲಾ ನ್ಯಾಯಾಧೀಶರಾದ ಶ್ರೀ ಸತ್ಯಮೂರ್ತಿ ಹೊಳ್ಳ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಆಯುಷ್ ಇಲಾಖೆಯ ಮುಖ್ಯ ಆಡಳಿತಾಧಿಕಾರಿಯವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶಿಸಿತ್ತು.

ಮೇಲೆ ಓದಲಾದ ಕ್ರ.ಸಂ.(2) ರಲ್ಲಿ ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿ ಆಪಾದಿತ ನೌಕರರ ಮೇಲಿನ ಆಪಾದನೆಗಳ ಬಗ್ಗೆ ವಿಚಾರಣಾ ವರದಿಯಲ್ಲಿ Audit report is neither produced nor marked before the enquiry authority for perusal ಎಂದು ತಿಳಿಸಿದ್ದು ಸದರಿ ವರದಿಯನ್ನು ಪರಿಶೀಲಿಸಿ ಸ್ಪಷ್ಟ ಅಭಿಪ್ರಾಯವನ್ನು ನೀಡಿರುವುದಿಲ್ಲ. ಆದರೆ, ಆಪಾದಿತ ಅಧಿಕಾರಿಯ ವಿರುದ್ಧ ಮಾಡಲಾದ ಆಪಾದನೆಗಳು ಸ್ಪಷ್ಟವಾಗಿವೆ. ಹಣ ಪಾವತಿಸಿರುವುದು ಅವರ ಅಧಿಕಾರ ವ್ಯಾಪ್ತಿಯಲ್ಲಿ ಬರುತ್ತದೆಯೋ ಇಲ್ಲವೋ ಅನ್ನುವುದನ್ನು ಪರಿಶೀಲಿಸುವುದಕ್ಕೆ ಸಾಕ್ಷಿಗಳ ಹೇಳಿಕೆಗಳು ಅವಶ್ಯಕತೆ ಇರುವುದಿಲ್ಲ. ಆಪಾದಿತ ನೌಕರರ ಎಲ್ಲಾ 13 ಆರೋಪಗಳ ಕುರಿತು ನಿಖರವಾಗಿ ವಿಚಾರಣಾ ವರದಿಯಲ್ಲಿ ತಿಳಿಸದೇ ಇರುವುದರಿಂದ, ಆರೋಪಿಯ ಮೇಲಿನ ಆರೋಪಗಳು ಸಾಬೀತಾಗುವ ಸಾಧ್ಯತೆಗಳಿಂದ ನುಣುಚಿಕೊಳ್ಳುವ ಸಾಧ್ಯತೆಗಳು ಇರುತ್ತವೆ. ಈ ಹಿನ್ನೆಲೆಯಲ್ಲಿ ಆರೋಪಿತ ಅಧಿಕಾರಿಯ ವಿರುದ್ಧ ಮಾಡಲಾದ ಆಪಾದನೆಗಳ ಬಗ್ಗೆ ಸ್ಪಷ್ಟವಾಗಿ ಸತ್ಯಾಸತ್ಯತೆಯನ್ನು ತಿಳಿದುಕೊಳ್ಳುವ ಉದ್ದೇಶದಿಂದ ಸದರಿ ವೈದ್ಯಾಧಿಕಾರಿಯ ವಿರುದ್ಧ ಇರುವ ಆಪಾದನೆಗಳ ಕುರಿತು ಮರು ವಿಚಾರಣೆಯನ್ನು ಕೈಗೊಳ್ಳುವುದು ಅವಶ್ಯಕವಾಗಿದೆ. ಈ ಹಿನ್ನೆಲೆಯಲ್ಲಿ ಸದರಿ ಪ್ರಕರಣದಲ್ಲಿ ಈಗ ಸರ್ಕಾರಕ್ಕೆ ಸಲ್ಲಿಸಿರುವ ವಿಚಾರಣಾ ವರದಿಯನ್ನು ಒಪ್ಪದೆ, ಮರು ವಿಚಾರಣೆಯನ್ನು (Denova Inquiry) ಕೈಗೊಳ್ಳಲು ನಿವೃತ್ತ ನ್ಯಾಯಾಧೀಶರಾದ ಶ್ರೀ ಸಿ.ಕೆ.ಬಾಲಕೃಷ್ಣ, ನಿವೃತ್ತ ನ್ಯಾಯಾಧೀಶರು, ಬೆಂಗಳೂರು ಇವರಿಗೆ ವಹಿಸಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 442 ಪಿಐಎಂ 2007, ಬೆಂಗಳೂರು, ದಿನಾಂಕ: 30ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಡಾ:ಮಹಮದ್ ಅಫ್ತಾಬ್ ವಾಸೀಂ, ವೈದ್ಯರು ದರ್ಜೆ–2 (ಹೋ) ಸರ್ಕಾರಿ ಹೋಮಿಯೋಪತಿ ಚಿಕಿತ್ಸಾಲಯ, ಶಾಸಕರ ಭವನ, ಬೆಂಗಳೂರು ಇವರ ವಿರುದ್ಧದ ಇಲಾಖಾ ವಿಚಾರಣೆಗೆ ಸಂಬಂಧಿಸಿದಂತೆ, ಸರ್ಕಾರಕ್ಕೆ ಸಲ್ಲಿಸಿರುವ ಇಲಾಖಾ ವಿಚಾರಣೆಯನ್ನು ಸರ್ಕಾರವು ಒಪ್ಪದೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮರುವಿಚಾರಣೆಯನ್ನು (Denova Inquiry) ನಡೆಸಲು ಆದೇಶಿಸಿದೆ. ಇದಕ್ಕಾಗಿ ಶ್ರೀ ಸಿ.ಕೆ.ಬಾಲಕೃಷ್ಣ, ನಿವೃತ್ತ ನ್ಯಾಯಾಧೀಶರು, ನಂ.2209, ತ್ರಿಕನ್ಯ, 80 ಅಡಿ ರಸ್ತೆ, ಹೆಚ್.ಎ.ಎಲ್. 3ನೇ ಹಂತ, ಇಂದಿರಾನಗರ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ ಹಾಗೂ ಮುಖ್ಯ ಆಡಳಿತಾಧಿಕಾರಿಗಳು, ಆಯುಷ್ ನಿರ್ದೇಶನಾಲಯ, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 22 ಸೇಇವಿ 2007, ದಿನಾಂಕ:11–04–2008 ರನ್ವಯ ರೂ. 8000/– (ಎಂಟು ಸಾವಿರ ರೂಪಾಯಿಗಳು ಮಾತ್ರ) ಗೌರವಧನ ಹಾಗೂ ರೂ. 1500/– (ಒಂದು ಸಾವಿರದ ಐದು ನೂರು ರೂಪಾಯಿಗಳು ಮಾತ್ರ) ವಾಹನ ಭತ್ಯೆಯನ್ನು ಪಡೆಯುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಹಾಲಕ್ಷ್ಮಮ್ಮ**

ಪಿ.ಆರ್. 1823

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾರತೀಯ ವೈದ್ಯ ಪದ್ಧತಿ)

## ಉನ್ನತ ಶಿಕ್ಷಣ ಸಚಿವಾಲಯ

### ತಿದ್ದುಪಡಿ ಆದೇಶ

**ಸಂಖ್ಯೆ: ಇಡಿ 248 ಯೋಸಕ 2008 (ಭಾಗ) ದಿನಾಂಕ: 6ನೇ ಆಗಸ್ಟ್ 2009**

**ವಿಷಯ:** ಆರ್.ಐ.ಡಿ.ಎಫ್.–13 ಯೋಜನೆಯಡಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಿಗೆ ತರಗತಿ ಕೊಠಡಿಗಳನ್ನು ನಿರ್ಮಾಣ ಮಾಡುವ ಬಗ್ಗೆ ಹೊರಡಿಸಿದ ಆದೇಶಕ್ಕೆ ತಿದ್ದುಪಡಿ ಮಾಡುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ : ಇಡಿ 172 ಯೋಸಕ 2008, ದಿನಾಂಕ: 30.12.2008

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ ಸರ್ಕಾರದ ಆದೇಶದಲ್ಲಿನ ಅನುಬಂಧದಲ್ಲಿ ಈ ಕೆಳಕಂಡ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಕಟ್ಟಡ ಕಾಮಗಾರಿಗಳನ್ನು

(ಲಕ್ಷ ರೂ.ಗಳಲ್ಲಿ)

| ಕ್ರ. ಸಂ. | ಜಿಲ್ಲೆ | ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಹೆಸರು | ಅಂದಾಜು ಮೊತ್ತ | ಈ ಹಿಂದಿನ ಆದೇಶದಲ್ಲಿ ಕಾಮಗಾರಿ ವಹಿಸಿದ ಸಂಸ್ಥೆಯ ಹೆಸರು | ಪರಿಷ್ಕರಿಸಿ ಕಾಮಗಾರಿ ವಹಿಸಿದ ಇಲಾಖೆ |
|---|---|---|---|---|---|
| 1. | ರಾಮನಗರ | ಬಿಡದಿ | 137.80 | ರೈಟ್ಸ್ ಸಂಸ್ಥೆ | ಲೋಕೋಪಯೋಗಿ ದಕ್ಷಿಣ |
| 2. | ಚಿಕ್ಕಮಗಳೂರು | ಬೀರೂರು | 200.00 | ರೈಟ್ಸ್ ಸಂಸ್ಥೆ | |
| 3. | | ಕಳಸ | 100.00 | ರೈಟ್ಸ್ ಸಂಸ್ಥೆ | |
| 4. | | ಅಜ್ಜಂಪುರ | 25.00 | ರೈಟ್ಸ್ ಸಂಸ್ಥೆ | |
| 5. | | ಪಂಚನಹಳ್ಳಿ | 50.00 | ರೈಟ್ಸ್ ಸಂಸ್ಥೆ | |
| 6. | ಕೊಪ್ಪಳ | ಹೊಸಬಂಡಿ ಹರ್ಲಾಪುರ | 100.00 | ರೈಟ್ಸ್ ಸಂಸ್ಥೆ | ಲೋಕೋಪಯೋಗಿ ಉತ್ತರ |
| 7. | ರಾಯಚೂರು | ಮಸ್ಕಿ | 100.00 | ರೈಟ್ಸ್ ಸಂಸ್ಥೆ | |

ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಉಳಿದ ಅಂಶಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1847 **ಎಸ್.ಎಂ. ನಂದಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಉನ್ನತ ಶಿಕ್ಷಣ ಇಲಾಖೆ (ಯೋಜನೆ)

## HEALTH AND FAMILY WELFARE SECRETARIAT

**Sub:** Strengthening of Project Office reg.

**Read:**
1. G.O. No.HFW/KHSDRP/Sect/1/2006, Bangalore, dt. 30.12.2006
2 Proceedings of the 3rd meeting of the Project Governing Board, dt. 13.11.2008
3. G.O. No.HFW/KHSDRP/Sect/1/2006 Bangalore, dt. 21.11.2007
4 GO . No.HFW/KHSDRP/Sect-54/2007,. Bangalore, dt. 13.03.200
5. G.O. No.HFW/KHSDRP/Merge-1/2007-08, Bangalore, dt. 18.02.2008 & G.O. No.HFW/KHSDRP/Merge-2/2007-08, Bangalore, dt. 28.03.2008

**Preamble:**

In the Govt. Order referred above, approval was given to the Karnataka Health System Development Project and its Organization set up, that included an Office of the Additional Director (KAS Senior Sclae), KHSDRP at Gulbarga. The said GO. Also approved creation of temporary posts in the Project that could be filled up on deputation from the Govt. or through an agency on hire basis.

The office at Gulbarga was created in order to monitor both KHSDRP and KFW Works taken up by the KHSDRP Project, in the backward region of Gulbarga. So far, only the ministerial level staff is functioning in this office with the post of Additional Director remaining vacant ever since it was created.

Meanwhile, the Engineering Wing of the Project is executing works of the entire Department including NRHM. Steps have been taken to strengthen it by creation of extra filed offices, i.e. Division and Sub-Division Offices and the required number of temporary posts for effective execution of civil works vide Govt. Orders at Read (3) and (4) above. The Administrative, Finance and Procurement wings of the Project have been merged with the NHRM and a District level merger of the two programmes has also been effected for a better coordinated implementation of both KHSDRP and NRHM. District Programme Management Officers have been placed at the district level plan, supervise and execute project activities and also steer NRHM activities, with no added financial implication.

Hence, it was proposed to wind up the Office at Gulbarga and instead strengthen the Project's head office by creating a few temporary posts in place of the surrendered posts in the office of the Additional Director KHSDRP, Gulbarga. The said proposal was discussed in the 3rd meeting of the Project

Governing Board held on 13.11.2008. The Board agreed to to the proposal of closing down the office of the Additional Director, KHSDRP, Gulbarga and creation of other posts.

Hence the following

**Govt. Order No. HFW (PR) 40 WBA 2009, Dated: 21st July 2009**

Government are pleased to approve the closure of the Office of the Additional Director, KHSDRP Gulbarga and its temporary staff created vide G.O. No.HFW/KHSDRP/Sect/1/2006, Bangalore, dated:30.12.2006 and instead create temporary posts for the KHSDRP Project Office as shown hereunder :

| Existing | | | | Posts created | | | |
|---|---|---|---|---|---|---|---|
| Post | No.of posts | Basic Pay | Total Emoluments (in Rs.) PM | Post | No.of posts | Basic Pay | (Approximate) Total Emoluments (in Rs.) PM |
| Additional Director | 1 | 20025 | 28694 | | - | | |
| Accounts Superintendent | 1 | 10800 | 15613 | Office Superintendent | 1 | 10000 | 14479 |
| FDA | 1 | 7275 | 10465 | FDA | 1 | 7275 | 10465 |
| SDA | 1 | 5800 | 8374 | SDA | 1 | 5800 | 8374 |
| Typist | 1 | 5800 | 8374 | Typist | 1 | 5800 | 8374 |
| Group “D” | 1 | 4800 (x2) | 13912 | Group “D” | 2 | 4800(x2) | 13912 |
| | | | | Steno | 2 | 7275 (x2) | 20930 |
| | | | | Typist | 1 | 5800 | 8374 |
| **Grand Total** | | | **85432** | | | | **84908** |
| **Total emoluments include Basic Pay, D.A., HRA. and CCA** | | | | | | | |

The Accounts Superintendent and First Division Assistant of the Additional Director’s Office shall hand over all records pertaining to both KHSDRP and KFW to the Office of the Executive Engineer, KHSDRP Engineering Division, Gulbarga and obtain acknowledgement. A copy of the same shall be marked to the Project Administrator, KHSDRP, Chief Finance Officer, Chief Administrative Officer, KHSDRP. The existing office furniture shall be handed over to the DPMO District Project Management Unit, Gulbarga, under acknowledgement. The Facsimile machine, Photocopier, Computer Systems, if any, shall be handed over to the Office of the Executive Engineer, KHSDRP Engineering Division Office, Gulbarga. The receiving Officer/official shall take to Stock all items received as per Office Procedure. The Accounts Superintendent of Division Office and FDA of Division Office shall take charge of all files from the Accounts Superintendent Sri Tibashetty.

The persons presently working in the Additional Director’s office shall get themselves relieved from their work place and report to the Office/department shown against their name in the following table.

| Sl. No. | Name | Designation | Category | Reporting Office |
|---|---|---|---|---|
| 1 | Sri Aiyappa G. Tibashetty | Accounts Superintendent | Government | State Accounts Department |
| 2 | Sri Mahesh | Group-D | Government | Office of the DPMO, Gulbarga |
| 3 | Sri Srinivas | Computer Operator | Outsourcing | To be relieved |
| 4 | Sri Sharanabasappa | Group-D | Outsourcing | To be relived |

The Accounts Superintendent, Office of the Additional Director, KHSDRP, Gulbarga shall submit a report on the action taken to this office. The Executive Engineer shall alsl furnish a report to this office.

By Order and in the name of Governor of Karnataka,

**SUSHAMA GODBOLE**

P.R. 1845

Deputy Secretary to Government, KHSDRP,
Health and Family Welfare Department

**ಉನ್ನತ ಶಿಕ್ಷಣ ಸಚಿವಾಲಯ**

**ವಿಷಯ:** 2009–10ನೇ ಸಾಲಿನಲ್ಲಿ ಕೊಪ್ಪಳ ಜಿಲ್ಲೆ, ಹೊಸಬಂಡಿ ಹರ್ಲಾಪುರದಲ್ಲಿ ಪ್ರಾರಂಭಿಸಲಾಗಿರುವ ನೂತನ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಕಟ್ಟಡದ ನಿರ್ಮಾಣ ಕಾಮಗಾರಿಗಳ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ ಇಡಿ 124 ಯೋಸಕಾ 2008, ದಿ: 2.6.2008 (ಸ್ವೀಮರ ಇಡಿ 124 (ಯುನಿಕ್) 2008, ದಿ: 2.6.2008
2. ಸರ್ಕಾರಿ ಆದೇಶ ಸಂಖ್ಯೆ : ಇಡಿ 248 ಯೋಸಕಾ 2008 ದಿ: 30.12.2008 (ಸ್ವೀಮರ ಇಡಿ 198 (ಯುನಿಕ್) 2008 ದಿ: 30.12.2008

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಕೊಪ್ಪಳ ಜಿಲ್ಲೆ, ಹೊಸಬಂಡಿ ಹರ್ಲಾಪುರದಲ್ಲಿ ಪ್ರಾರಂಭಿಸಲಾಗಿರುವ ನೂತನ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಕಟ್ಟಡದ ನಿರ್ಮಾಣ ಕಾಮಗಾರಿಗಳ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಮಂಜೂರಾತಿ ನೀಡಿ ಸದರಿ ಕಟ್ಟಡದ ಕಾಮಗಾರಿಯನ್ನು ಕರ್ನಾಟಕ ಭೂಸೇನಾ ನಿಗಮ ವತಿಯಿಂದ ಕೈಗೊಳ್ಳಲು ಆದೇಶಿಸಲಾಗಿತ್ತು. ಮೇಲೆ ಓದಲಾದ (2)ರ ಸರ್ಕಾರಿ ಆದೇಶದಲ್ಲಿ ಕೆಲವೊಂದು ತಿದ್ದುಪಡಿ ಮಾಡಿ ಕರ್ನಾಟಕ ಭೂಸೇನಾ ನಿಗಮಕ್ಕೆ ಬದಲಾಗಿ ಒಟ್ಟು 23 ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ಕಟ್ಟಡ ಕಾಮಗಾರಿಗಳನ್ನು ರೈಟ್ಸ್ ಸಂಸ್ಥೆಗೆ ವಹಿಸಿಕೊಡಲಾಗಿತ್ತು. ಪ್ರಸ್ತುತ 23 ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ಪೈಕಿ ಸಂಖ್ಯೆ ಇಡಿ 248 ಯೋಸಕಾ 2008 ದಿನಾಂಕ: 30.12.2008 (ಸ್ವೀಮರ ಇಡಿ 198 (ಯುನಿಕ್) 2008 ದಿ: 30.12.2008ರ ಸರ್ಕಾರಿ ಆದೇಶದಲ್ಲಿನ ಕ್ರಮ ಸಂಖ್ಯೆ 23 ರಲ್ಲಿ ನಮೂದಿಸಿರುವ ಕೊಪ್ಪಳ ಜಿಲ್ಲೆ, ಹೊಸಬಂಡಿ ಹರ್ಲಾಪುರದಲ್ಲಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಕಟ್ಟಡ ನಿರ್ಮಾಣ ಕಾಮಗಾರಿಗಳನ್ನು ಲೋಕೋಪಯೋಗಿ ಇಲಾಖೆಗೆ ವಹಿಸಿಕೊಡಲು ಉದ್ದೇಶಿಸಿರುವುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 03 ಯೋಸಕ 2008, ಬೆಂಗಳೂರು, ದಿನಾಂಕ: 7ನೇ ಆಗಸ್ಟ್ 2009**

ಕೊಪ್ಪಳ ಜಿಲ್ಲೆ, ಹೊಸಬಂಡಿ ಹರ್ಲಾಪುರದಲ್ಲಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಕಟ್ಟಡ ನಿರ್ಮಾಣ ಕಾಮಗಾರಿಗಳನ್ನು ರೈಟ್ಸ್ ಸಂಸ್ಥೆಯಿಂದ ವಾಪಸ್ಸು ಪಡೆದು, 2009–10ನೇ ಸಾಲಿಗೆ ರೂ. 1.00 ಕೋಟಿ (ಒಂದು ಕೋಟಿ ಮಾತ್ರ) ವೆಚ್ಚದಲ್ಲಿ ಲೋಕೋಪಯೋಗಿ ಇಲಾಖೆಗೆ ವಹಿಸಿಕೊಟ್ಟು ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡಲು ಈ ಕೆಳಕಂಡ ಷರತ್ತುಗಳನ್ನು ವಿಧಿಸಿ, ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು, ಇವರಿಗೆ ಅನುಮತಿ ನೀಡಿದೆ.

**ಷರತ್ತುಗಳು :**

1. ಕಾಮಗಾರಿಯನ್ನು ನಿಗದಿತ ಸಮಯದೊಳಗೆ ಮುಗಿಸಲು ಕ್ರಮ ಕೈಗೊಳ್ಳತಕ್ಕದ್ದು. ಕಟ್ಟಡ ನಿರ್ಮಾಣದ ಗುಣಮಟ್ಟದ ಬಗ್ಗೆ ನಿಗಾ ವಹಿಸಲು ಸೂಕ್ತ ಕ್ರಮ ಕೈಗೊಳ್ಳತಕ್ಕದ್ದು.
2. ಕೇಂದ್ರ ಕಛೇರಿಯಿಂದ ತಿಂಗಳಿಗೊಮ್ಮೆ ಕಟ್ಟಡ ನಿರ್ಮಾಣದ ಕಾಮಗಾರಿ ಅಭಿವೃದ್ಧಿಯನ್ನು ಪರಿಶೀಲಿಸಿ, ಸರ್ಕಾರಕ್ಕೆ ವರದಿಯನ್ನು ಸಲ್ಲಿಸತಕ್ಕದ್ದು. ಕಟ್ಟಡ ನಿರ್ಮಾಣ ಕಾರ್ಯವನ್ನು ವಹಿಸುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು. ಪ್ರತಿ ಮಾಹೆಯ ಕಾಮಗಾರಿಯ ಪ್ರಗತಿ ವರದಿಯನ್ನು ಆಯಾ ಮಾಹೆಯ ಎಂ.ಎಂ.ಆರ್ ವರದಿಯಲ್ಲಿ ನಮೂದಿಸತಕ್ಕದ್ದು.
3. ಮೇಲ್ಕಂಡ ಮೊತ್ತಕ್ಕೆ ನಕ್ಷೆ ಮತ್ತು ಅಂದಾಜು ಪಟ್ಟಿಯನ್ನು 2009–10ನೇ ಸಾಲಿನ ದರದಂತೆ ತಯಾರಿಸಿ ಸರ್ಕಾರದ ಅನುಮೋದನೆ ಪಡೆದು ಆಡಳಿತಾತ್ಮಕ ಅನುಮೋದನೆ ನೀಡತಕ್ಕದ್ದು.
4. ಇದಕ್ಕೆ ಸಂಬಂಧಿಸಿದ ಮೊತ್ತವನ್ನು 2009–10ನೇ ಸಾಲಿಗೆ ಲೆಕ್ಕ ಶೀರ್ಷಿಕೆ 4202–01–203–1–01–139 ಅಡಿ ಒದಗಿಸಿರುವ ಅನುದಾನದಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1851

**ಎಸ್.ಎಂ. ನಂದಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಉನ್ನತ ಶಿಕ್ಷಣ ಇಲಾಖೆ (ಯೋಜನೆ)

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ರಾಮಕೃಷ್ಣ ಆರ್. ಮಹಾಲಕ್ಷ್ಮೀಪುರಂ, ಬೆಂಗಳೂರು ಇವರ ಸಾವಿನ ತನಿಖೆಯನ್ನು ಸಿ.ಐ.ಡಿ.ಗೆ ವಹಿಸುವ ಬಗ್ಗೆ.

**ಓದಲಾಗಿದೆ:** 1. ರಿಟ್ ಅರ್ಜಿ 2334/06 (ಜಿ.ಎಂ. ಪೊಲೀಸ್) ಇದರಲ್ಲಿ ದಿನಾಂಕ: 24.4.2009 ರಂದು ಮಾನ್ಯ ಉಚ್ಚ ನ್ಯಾಯಾಲಯವು ನೀಡಿರುವ ತೀರ್ಪು.

**ಪ್ರಸ್ತಾವನೆ:**

ಶ್ರೀ ಕೆ.ಕೆ. ರಂಗಸ್ವಾಮಿ ಬಿನ್ ಲೇಟ್ ಕೆಂಚಪ್ಪ, ಬೋವಿಪಾಳ್ಯ, ಮಹಾಲಕ್ಷ್ಮೀಪುರಂ, ಬೆಂಗಳೂರು, ಇವರು ತಮ್ಮ ಮಗನಾದ ಆರ್ ರಾಮಕೃಷ್ಣ ಎಂಬುವವರು ದಿನಾಂಕ 29.08.2005 ರಂದು ನಿಗೂಢ ರೀತಿಯಲ್ಲಿ ಮೃತಪಟ್ಟಿದ್ದು, ಈ ಬಗ್ಗೆ ರಾಜಗೋಪಾಲನಗರ ಪೊಲೀಸ್ ಠಾಣೆಯಲ್ಲಿ ಪ್ರಕರಣವನ್ನು ದಾಖಲಿಸಿದ್ದು, ಪ್ರಕರಣದ ವಿಚಾರಣೆಯನ್ನು ಪೊಲೀಸರು ಸರಿಯಾದ ರೀತಿಯಲ್ಲಿ ನಡೆಸದೇ ಇದ್ದುದರಿಂದ ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂ. 2334/06ನ್ನು ಸಲ್ಲಿಸಿದ್ದರು.ಈ ರಿಟ್ ಅರ್ಜಿಯಲ್ಲಿ ಗೃಹ ಕಾರ್ಯದರ್ಶಿ, ಮತ್ತು ಬೆಂಗಳೂರು ನಗರದ ಪೊಲೀಸ್ ಆಯುಕ್ತರನ್ನು ಕ್ರಮವಾಗಿ 1 ಮತ್ತು 2ನೇ ಪ್ರತಿವಾದಿಯನ್ನಾಗಿ ಮಾಡಲಾಗಿದೆ. ಸದರಿ ರಿಟ್ ಅರ್ಜಿಯಲ್ಲಿ ಮಾನ್ಯ ರಾಜ್ಯ ಉಚ್ಚ ನ್ಯಾಯಾಲಯವು ದಿನಾಂಕ:24.4.09 ರಂದು ನೀಡಿರುವ ತೀರ್ಪಿನಲ್ಲಿ ಪ್ರಕರಣವನ್ನು ಸಿ.ಐ.ಡಿ. ತನಿಖೆಗೆ ವಹಿಸಲು ಆದೇಶಿಸಿರುತ್ತದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂ: ಒಇ 76, ಸಿಒಡಿ 09, ಬೆಂಗಳೂರು, ದಿನಾಂಕ: 12ನೇ ಆಗಸ್ಟ್ 2009**

ಮೇಲೆ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಆರ್. ರಾಮಕೃಷ್ಣ ಇವರ ನಿಗೂಢ ರೀತಿಯ ಸಾವಿನ ಬಗ್ಗೆ ಮಾನ್ಯ ರಾಜ್ಯ ಉಚ್ಚ ನ್ಯಾಯಾಲದ ರಿಟ್ ಅರ್ಜಿ ಸಂ. 2334/06ರಲ್ಲಿ ದಿನಾಂಕ: 24.4.09ರ ತೀರ್ಪಿನಲ್ಲಿ ಸೂಚಿಸಿರುವಂತೆ ಸದರಿ ಪ್ರಕರಣದ ತನಿಖೆಯನ್ನು ಸಿ.ಐ.ಡಿ.ಗೆ. ವಹಿಸಿ ಆದೇಶಿಸಲಾಗಿದೆ.

ಸಿ.ಐ.ಡಿ. ತಂಡವು ಈ ಪ್ರಕರಣದ ತನಿಖೆಯನ್ನು ಪೂರ್ಣಗೊಳಿಸಿ ಶೀಘ್ರದಲ್ಲಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1852

**ಪಿ. ಶಿವರಾಮ ಭಟ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಅಪರಾಧಗಳು)

**ವಿಷಯ:** ಶ್ರೀ ಆರ್.ಕೆ. ರಮೇಶ್, ದ್ವಿ.ದ.ಸ., ರಾಮನಗರ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:** ಪೊಲೀಸ್ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ರವರ ಕಚೇರಿ ಪತ್ರ ಸಂಖ್ಯೆ: ಅಪೀಲು(2)115/2008–09 ದಿನಾಂಕ: 18–04–2009.

**ಪ್ರಸ್ತಾವನೆ:**

ಶ್ರೀ ಆರ್.ಕೆ. ರಮೇಶ್, ದ್ವಿದಸ ರವರು ಈ ಕೆಳಗಿನ ಕರ್ತವ್ಯ ನಿರ್ಲಕ್ಷ್ಯತೆಗಾಗಿ 1957ರ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳ ನಿಯಮ 12 ರ ಮೇರೆಗೆ ದೋಷಾರೋಪಣೆ ಹೊರಡಿಸಿರುತ್ತಾರೆ.

**ದೋಷಾರೋಪಣೆ:**

"ಶ್ರೀ ಆರ್.ಕೆ.ರಮೇಶ್, ದ್ವಿದಸ ಆಗಿ ಕರ್ತವ್ಯ ನಿರ್ವಹಿಸುತ್ತಿರುವ ನಿಮಗೆ ಈ ಕಛೇರಿಯ ಜ್ಞಾಪನ ಸಂಖ್ಯೆ:ಸಿಬ್ಬಂದಿ(1)/ಆರ್‌ಡಿಪಿಒ/2007–08 ದಿನಾಂಕ: 08–02–2008 ಮತ್ತು 20–03–2008 ರಲ್ಲಿ ಇಲಾಖಾ ವಿಚಾರಣೆ ಹಾಗೂ ನಿವೃತ್ತಿ ವೇತನ ಶಾಖೆಯನ್ನು ಹಂಚಿಕೆ ಮಾಡಿ ಪ್ರಭಾರವನ್ನು ವಹಿಸಿಕೊಳ್ಳಲು ಸೂಚಿಸಿದ್ದರು ಸಹ ಹಿರಿಯ ಅಧಿಕಾರಿಗಳ ಆದೇಶವನ್ನು ಉಲ್ಲಂಘಿಸಿ ನಿಮಗೆ ವಹಿಸಿದ ಶಾಖೆಯು ಪ್ರಭಾರವನ್ನು ವಹಿಸಿಕೊಳ್ಳಲು ನಿರಾಕರಿಸಿರುವುದು ಹಾಗೂ ದಿನಾಂಕ: 27–03–2008 ರಿಂದ 05–04–2008 ರವರೆಗೆ 10 ದಿವಸ ಪರಿವರ್ತಿತ ರಜೆ ಮಂಜೂರಾತಿ ಕೋರಿ ಅರ್ಜಿ ಸಲ್ಲಿಸಿ ರಜೆ ಮಂಜೂರು ಮಾಡಿಸಿಕೊಳ್ಳದೇ ದಿನಾಂಕ: 27–03–2008 ರಿಂದ ಕರ್ತವ್ಯಕ್ಕೆ ಗೈರುಹಾಜರಾಗಿರುವುದು ನಿಮ್ಮ ಮೇಲಿನ ಆರೋಪವಾಗಿರುತ್ತದೆ."

ಮೇಲ್ಕಂಡ ದೋಷಾರೋಪಣೆ ಪತ್ರವನ್ನು ಸದರಿಯವರು ದಿನಾಂಕ: 09–04–2008 ರಂದು ಪಡೆದು ತಮ್ಮ ಸಮಜಾಯಿಷಿಯನ್ನು ದಿನಾಂಕ: 17–04–2008 ರಂದು ಸಲ್ಲಿಸಿರುತ್ತಾರೆ. ಸಮಜಾಯಿಷಿಯನ್ನು ಪರಿಶೀಲಿಸಿ ಶಿಸ್ತು ಪ್ರಾಧಿಕಾರಿಯವರು ಈ ಕೆಳಕಂಡಂತೆ ಆದೇಶಿಸಿರುತ್ತಾರೆ.

"ಪೊಲೀಸ್ ಅಧೀಕ್ಷಕರು, ರಾಮನಗರ ಜಿಲ್ಲೆ, ರಾಮನಗರ ರವರು ದಿನಾಂಕ: 12–06–2008 ರಂದು ಶ್ರೀ ಆರ್.ಕೆ.ರಮೇಶ್, ದ್ವಿದಸ, ಜಿಲ್ಲಾ ಪೊಲೀಸ್ ಕಛೇರಿ, ರಾಮನಗರ ರವರು ಗೈರುಹಾಜರಾದ ಅವಧಿ ದಿನಾಂಕ:27–03–2008 ರಿಂದ 09–04–2008 ರವರೆಗೆ 10 ದಿವಸ ವೇತನ ರಹಿತ ರಜೆಯೆಂದು ಪರಿಗಣಿಸಿರುತ್ತಾರೆ."

ಶಿಸ್ತು ಪ್ರಾಧಿಕಾರದ ದಿನಾಂಕ: 12–06–2008ರ ಆದೇಶದ ವಿರುದ್ಧ ಮೇಲ್ಮನವಿದಾರರು ಅರ್ಜಿ ದಿನಾಂಕ: 04–12–2008 ರಂದು ಸಲ್ಲಿಸಿದ್ದರಿಂದ ನಿಯಮಗಳ ಪ್ರಕಾರ 3 ತಿಂಗಳು ಅವಕಾಶವಿದೆ. ಅಪೀಲು ಅವಧಿ ನಂತರ ಸಲ್ಲಿಸಿದ್ದರಿಂದ ಸ್ವೀಕರಿಸಲು ಸಾಧ್ಯವಿರುವುದಿಲ್ಲ ವೆಂದು ದಿನಾಂಕ: 19–12–2008 ರಂದು ಅರ್ಜಿದಾರರಿಗೆ ಹಿಂಬರಹವನ್ನು ನೀಡಿರುತ್ತಾರೆ.

ಶಿಸ್ತು ಪ್ರಾಧಿಕಾರದ ಆದೇಶ ದಿನಾಂಕ: 12–06–2008 ಹಾಗೂ ದಿನಾಂಕ 30–09–2008ರ ಹಿಂಬರಹಗಳ ವಿರುದ್ದ ಸರ್ಕಾರಕ್ಕೆ ದಿನಾಂಕ: 05–01–2009 ರಂದು ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ.

ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಯಾವುದೇ ಹೊಸ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 21 ಪೊಸಿಲಿ 2009, ಬೆಂಗಳೂರು, ದಿನಾಂಕ: 30ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಆರ್.ಕೆ. ರಮೇಶ್, ದ್ವಿ.ದ.ಸ. ರಾಮನಗರ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 26(ಎ) ಪ್ರಕಾರ ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1861 **ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಕೆ. ಮಂಜುನಾಥ ಶೆಟ್ಟಿ, ಪ್ರೊ ಪಿ.ಎಸ್.ಐ. ರವರ ಖಾಯಂ ಪೂರ್ವ ಅವಧಿಯನ್ನು ವಿಸ್ತರಿಸುವ ಕುರಿತು.

**ಓದಲಾಗಿದೆ:** 1. ಡಿ.ಜಿ. ಮತ್ತು ಐ.ಜಿ.ಪಿ. ರವರ ಪತ್ರ ಸಂಖ್ಯೆ: 90/ಸಿಬ್ಬಂದಿ–1/2006–07, ದಿನಾಂಕ:03.02.2006, 11,03.2006, 11.12.2008, 11.03.2009, 28.04.2009 ಮತ್ತು 20.06.2009.

**ಪ್ರಸ್ತಾವನೆ:**

ಶ್ರೀ ಕೆ. ಮಂಜುನಾಥ ಶೆಟ್ಟಿ, ಪ್ರೊಬೇಷನರಿ ಸೇವಾ ನಿರತ ಪಿ.ಎಸ್.ಐ. (ಸಿವಿಲ್) ಚಿತ್ರದುರ್ಗ ಜಿಲ್ಲೆ, ಇವರು ಪಿ.ಎಸ್.ಐ. ಹುದ್ದೆಗೆ ನೇಮಕಾತಿ ಹೊಂದಿ ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳನ್ನು ಹಾಗೂ ತರಬೇತಿಯಲ್ಲಿ ನಿಗದಿಪಡಿಸಿದ ಪರೀಕ್ಷೆಗಳನ್ನು ಪಾಸು ಮಾಡಿರುತ್ತಾರೆ. ಇವರ ಖಾಯಂಪೂರ್ವ ಅವಧಿಯು ದಿನಾಂಕ:30.06.2004ಕ್ಕೆ ಮುಗಿದಿರುತ್ತದೆ. ಈ ಅವಧಿಯಲ್ಲಿ ಇವರ ಮೇ ಚಾಲ್ತಿ ಶಿಕ್ಷೆಗಳಿದ್ದುದರಿಂದ ಹಾಗೂ ಇಲಾಖಾ ವಿಚಾರಣೆ ಬಾಕಿ ಇದ್ದುದರಿಂದ ಐ.ಜಿ.ಪಿ. ಪೂರ್ವ ವಲಯ, ದಾವಣಗೆರೆ ರವರು ದಿನಾಂಕ 30.06.2004 ರಿಂದ 30.06.2005 ರವರೆಗೆ ಹಾಗೂ ಪೊಲೀಸ್ ಅಧೀಕ್ಷಕರು, ಚಿತ್ರದುರ್ಗ ಇವರು ಸದರಿಯವರ ಖಾಯಂ ಪೂರ್ವ ಅವಧಿಯನ್ನು ದಿನಾಂಕ: 30.06.2005 ರಿಂದ 30.09.2005ರ ವರೆಗೆ ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 4 (1) (ii) ರನ್ವಯ ವಿಸ್ತರಿಸಿ ಆದೇಶಿಸಿರುತ್ತಾರೆ. ಸದರಿ ಪಿ.ಎಸ್.ಐ. ರವರ ಪ್ರೊಬೇಷನರಿ ಅವಧಿಯನ್ನು ದಿನಾಂಕ: 1.10.2005 ರಿಂದ 30.01.2008ರವರೆಗೆ ವಿಸ್ತಿರಿಸುವಂತೆ ಮೇಲೆ ಓದಲಾದ (1) ರ ಪತ್ರದಲ್ಲಿ ಕೋರಲಾಗಿರುತ್ತದೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 52 ಪೊಸಇ 2006, ಬೆಂಗಳೂರು, ದಿನಾಂಕ: 29ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 4(1) (i)ರನ್ವಯ ಶ್ರೀ ಕೆ. ಮಂಜುನಾಥ ಶೆಟ್ಟಿ, ಪಿ.ಎಸ್.ಐ. ಇವರ ಖಾಯಂ ಪೂರ್ವ ಅವಧಿಯನ್ನು ದಿನಾಂಕ: 01.10.2005 ರಿಂದ 30.01.2008 ರವರೆಗೆ ವಿಸ್ತರಿಸಿ ಆದೇಶಿಸಿದೆ.

ವಿಸ್ತರಿಸಿದ ಪರಿವೀಕ್ಷಣಾ ಅವಧಿಗೆ ಕ.ನಾ.ಸೇ. (ಪರಿವೀಕ್ಷಣೆ) ನಿಯಮಗಳು 1977ರ ನಿಯಮ 10ರ ಪ್ರಕಾರ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ಕಾಲ್ಪನಿಕವಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗದಿಪಡಿಸುವುದು. ಹೀಗೆ ನಿಗದಿಪಡಿಸಿದ ವೇತನದ ಬಾಕಿಯನ್ನು ನೀಡಲು ಅವಕಾಶವಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1862 **ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಚಿಕ್ಕರಾಮಯ್ಯ, ಶಾಖಾಧೀಕ್ಷಕರು ರವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 224ಎ ರನ್ವಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯ ಪರಿಗಣಿಸುವ ಬಗ್ಗೆ.

**ಓದಲಾಗಿದೆ:** ಪೊಲೀಸ್ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ರವರ ಕಚೇರಿ ಪತ್ರ ಸಂಖ್ಯೆ: ಸಿಬ್ಬಂದಿ–6/86/2008–09 ದಿನಾಂಕ: 13–03–2009.

**ಪ್ರಸ್ತಾವನೆ:**

ಶ್ರೀ ಚಿಕ್ಕರಾಮಯ್ಯ, ಶಾಖಾಧೀಕ್ಷಕರು ಇವರು ಪೊಲೀಸ್ ಇಲಾಖೆಗೆ ಸೇರುವ ಪೂರ್ವದಲ್ಲಿ ಅಂದರೆ ದಿನಾಂಕ: 07–12–1977 ರಿಂದ 02–11–1983 ರ ವರೆಗೆ ದ್ವಿತೀಯ ದರ್ಜೆ ಸಹಾಯಕರಾಗಿ ವಿಮಾ ಇಲಾಖೆಯಲ್ಲಿ ಸೇವೆ ಸಲ್ಲಿಸಿರುತ್ತಾರೆ. ನಂತರ ಕರ್ನಾಟಕ ಲೋಕಸೇವಾ ಆಯೋಗದ ಮೂಲಕ ಪ್ರಥಮ ದರ್ಜೆ ಸಹಾಯಕರಾಗಿ ಆಯ್ಕೆಯಾಗಿ ದಿನಾಂಕ: 02–11–1983 ರಂದು ವರದಿ ಮಾಡಿಕೊಂಡಿರುತ್ತಾರೆ. ಆದ್ದರಿಂದ ಈ ಹಿಂದೆ ವಿಮಾ ಇಲಾಖೆಯಲ್ಲಿ ಸಲ್ಲಿಸಿದ ಸೇವೆಯನ್ನು ಕೆ.ಸಿ.ಎಸ್.ಆರ್. ನಿಯಮ 224(ಎ) ಪ್ರಕಾರ ನಿವೃತ್ತಿ ವೇತನ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವಂತೆ ಮೇಲೆ ಓದಲಾದ ಪತ್ರದಲ್ಲಿ ಪೊಲೀಸ್ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ರವರು ಕೋರಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 47 ಪೊಸಿಲಿ 2009, ಬೆಂಗಳೂರು, ದಿನಾಂಕ: 29ನೇ ಜುಲೈ 2009**

ಶ್ರೀ ಚಿಕ್ಕರಾಮಯ್ಯ, ಶಾಖಾಧೀಕ್ಷಕರು, ಕೇಂದ್ರ ವಲಯ ಕಚೇರಿ, ಬೆಂಗಳೂರು ಇವರು ಈ ಹಿಂದೆ ಕರ್ನಾಟಕ ಸರ್ಕಾರಿ ವಿಮಾ ಇಲಾಖೆಯಲ್ಲಿ ದಿನಾಂಕ: 07–12–1977 ರಿಂದ 02–11–1983 ರ ವರೆಗೆ ದ್ವಿತೀಯ ದರ್ಜೆ ಸಹಾಯಕರಾಗಿ ಸಲ್ಲಿಸಿರುವ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 224–ಎ ಅನ್ವಯ ನಿವೃತ್ತಿ ಸೌಲಭ್ಯಗಳಿಗೆ ಮಾತ್ರ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಿ ಸರ್ಕಾರವು ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 366 ವೆಚ್ಚ–11/2009 ದಿನಾಂಕ: 05–06–2009ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1863

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## INFRASTRUCTURE DEVELOPMENT SECRETARIAT

**Sub:** Suminfra 2009 – A summit on Sustainable PPPs in Infrastructure to be held on 6th and 7th August, 2009 in Chennai – reg.

**Read:** 1. Letter No. Nil dated 20th June, 2009 from the Chairman, Confederation of Indian Industry (SR).

**Premable:**

Chairman, Confederation of Indian Industry (CII) vide his letter referred to above, has stated that Confederation of Indian Industry (SR) is organizing the 7th Edition of its annual summit on Sustainable PPPs in infrastructure "**Suminfra 2009"** on 6th and 7th of August, 2009 at Hotel Le Royal Meridien, Chennai.

2. Suminfra is a unique forum promoted by the CII jointly with the State Government in Southern Region to promote Public Private Partnership (PPP) in Infrastructure Development in the Southern States. It brings together all stakeholders concerned with infrastructure development on a common platform and also showcase private sector experiences with PPP's in Infrastructure.

3. It has also been stated that the two days summit would be addressed by the Union Ministers, Chief Ministers of the Southern states and Senior bureaucrats from the Central and State Governments and also Industry Leaders from Infrastructure. He has further requested to participate at the SIIP session and to support this initiative by way of sponsorship.

4. The proposal of the Chairman, Confederation of Indian Industry has been examined. Hence this order.

**Government Order No.IDD 44 IDM 2009, Bangalore, Dated: 31st July 2009**

Government is pleased to extend its support and sanction an amount of Rs. 5.00 lakhs (Rupees Five Lakhs only) for Suminfra 2009 to be held at Chennai on 6th and 7th August, 2009.

2. The above expenditure is to be met under the Head of Account "3451-00-090-1-06-059- Infrastructure Preliminary Studies–other Expenses (Plan)'.

3. The Managing Director, IDeGK would draw this amount on a payee's receipt duly countersigned by the Under Secretary to Govt., Infrastructure Development Department and to make suitable arrangements for onward payment to Suminfra 2009.

4. This order is issued in accordance with the financial powers delegated to Principal Secretaries/Secretaries vide G.O. No.FD 1 TFP 2008 dated 16.5.2008.

By Order and in the name of Governor of Karnataka,

**N. MANJULA GEETHA**

P.R. 1864

Under Secretary to Government,

Infrastrcutre Development Department

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಪ್ರಕಾಶ್, ನಿವೃತ್ತ ಸಹಾಯಕ, ಅಭಿಯೋಗ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಬೆಂಗಳೂರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247 (ಎ) (1)ರ ಸೌಲಭ್ಯಕ್ಕೆ ಪರಿಗಣಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ–II ಸಂ ಲಾ 161 ಪಿಪಿಇ 86, ದಿನಾಂಕ: 24.07.1989
2. ಸರ್ಕಾರದ ಪತ್ರದ ಸಂ. ಲಾ 199 ಪಿಪಿಇ 91, ದಿನಾಂಕ: 5.12.1991
3. ಸದರಿ ಅಧಿಕಾರಿಯವರ ಮನವಿ ದಿನಾಂಕ: 17.05.2007
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಇವರ ಪತ್ರ ಸಂ.ಡಿಪಿಎನ್/ ಸಿಶಾ–1/45/2007–08 ದಿನಾಂಕ: 22.05.2007

**ಪ್ರಸ್ತಾವನೆ:**

ಶ್ರೀ ಪ್ರಕಾಶ್, ನಿವೃತ್ತ ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಬೆಂಗಳೂರು, ಇವರು ಮೇಲೆ (1) ರಲ್ಲಿ ಓದಲಾದ ದಿನಾಂಕ: 24.07.1989ರ ಸರ್ಕಾರದ ಅಧಿಸೂಚನೆಯ ಕ್ರ.ಸಂ. 49ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ: 5.8.1989 ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಮೇಲೆ (2) ರಲ್ಲಿ ಓದಲಾದ ದಿನಾಂಕ: 5.12.1991ರ ಸರ್ಕಾರದ ಪ್ರತದನ್ವಯ ಸದರಿ ನಿವೃತ್ತ ಅಧಿಕಾರಿಯ ಜನ್ಮ ದಿನಾಂಕವನ್ನು 28.06.1949 ಎಂದು ಒಪ್ಪಲಾಗಿದೆ.

ಮೇಲೆ (3) ರಲ್ಲಿ ಓದಲಾದ ಮನವಿಯಲ್ಲಿ ಸದರಿ ನಿವೃತ್ತ ಅಧಿಕಾರಿರವರು – ಮೇಲೆ (1) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆ ಮತ್ತು (2) ರಲ್ಲಿ ಓದಲಾದ ಸರ್ಕಾರದ ಪತ್ರದನ್ವಯ 40 ವರ್ಷ, 1 ತಿಂಗಳು 7 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಕೆಲಸಕ್ಕೆ ಸೇರಿದಂತೆ ಆಗಿರುತ್ತದೆ. ಆದುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247 (ಎ) ರನ್ವಯ ಗರಿಷ್ಠ ಮಿತಿಯಾದ 4 ವರ್ಷಗಳ ಹೆಚ್ಚುವರಿ ಸೇವೆಗೆ ಅರ್ಹರಿದ್ದು, ಸದರಿಯವರ ಅರ್ಹತಾದಾಯಕ ಸೇವೆಗೆ ಹೆಚ್ಚುವರಿ ಸೇವೆಯನ್ನು ಸೇರ್ಪಡೆ ಮಾಡುವಂತೆ ಕೋರಿರುತ್ತಾರೆ.

ಮೇಲೆ (4) ರಲ್ಲಿ ಓದಲಾದ ದಿನಾಂಕ: 22.05.2007ರ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರುರವರು ಮೇಲೆ (1) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆ ಹಾಗೂ (2) ಮತ್ತು (3) ರಲ್ಲಿ ಓದಲಾದ ಪತ್ರಗಳ ಹಿನ್ನೆಲೆಯಲ್ಲಿ ಶ್ರೀ ಪ್ರಕಾಶ್, ನಿವೃತ್ತ ಸಹಾಯಕ ಅಭಿಯೋಗ ನಿರ್ದೇಶಕರವರು 40 ವರ್ಷ 1 ತಿಂಗಳು, 7 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುವುದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247 (ಎ) (1)ರ ಪ್ರಕಾರ ನಿವೃತ್ತಿ ವೇತನಕ್ಕೆ ಮಾತ್ರ ಗರಿಷ್ಠ ಮಿತಿಯಾದ ನಾಲ್ಕು ವರ್ಷಗಳ ಸೇವೆಯನ್ನು ಹೆಚ್ಚುವರಿಯಾಗಿ ಸದರಿ ಅಧಿಕಾರಿಯ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಸರ್ಕಾರವು ಆದೇಶವನ್ನು ಹೊರಡಿಸುವುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಆದುದರಿಂದ ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಒಇ 265 ಪಿಪಿಇ 2007, ಬೆಂಗಳೂರು, ದಿನಾಂಕ: 5ನೇ ಆಗಸ್ಟ್ 2009**

ಶ್ರೀಯುತ ಪ್ರಕಾಶ್, ನಿವೃತ್ತ ಸಹಾಯಕ ಅಭಿಯೋಗ ನಿರ್ದೇಶಕರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247 (ಎ) (1) ರನ್ವಯ ಗರಿಷ್ಠ ಮಿತಿಯಾದ ನಾಲ್ಕು ವರ್ಷಗಳ ಅಧಿಕ ಸೇವೆಯನ್ನು ಶ್ರೀಯುತರ ನಿವೃತ್ತಿ ವೇತನಕ್ಕೆ ಮಾತ್ರ ಹೆಚ್ಚುವರಿ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: ಆಇ 619 ವೆಚ್ಚ–11/2009, ದಿನಾಂಕ: 01.07.2009ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸಿ. ಸಿದ್ದಪ್ಪ**

ಪಿ.ಆರ್. 1865 ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

(ಕಾ ಮತ್ತು ಸು ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಗುಬ್ಬಿಯ ಹೆಚ್ಚುವರಿ ಸಿವಿಲ್ ಜಡ್ಜ್ (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಸಹಾಯಕ ಸರ್ಕಾರಿ ಅಭಿಯೋಜಕರು–ವ–ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯನ್ನು ಹಾಗೂ ಅವರ ಕಛೇರಿಗೆ ಪೂರಕ ಸಿಬ್ಬಂದಿಯ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ: ಲಾ 47 ಎಲ್‌ಸಿಇ 2004, ದಿನಾಂಕ 23.06.2005.
2. ಸರ್ಕಾರದ ಆದೇಶ ಸಂ: ಲಾ 360 ಎಲ್‌ಸಿಇ 2007, ದಿನಾಂಕ : 31.01.2008.
3. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಇವರ ಪತ್ರ ಸಂಖ್ಯೆ: ಡಿಪಿಎನ್/ಸಿಶಾ1/178/2007–08, ದಿನಾಂಕ: 29.02.2008.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ರಾಜ್ಯದ ವಿವಿಧ ದರ್ಜೆಯ 90 ನ್ಯಾಯಾಲಯಗಳನ್ನು ಸ್ಥಾಪಿಸಲು ಆದೇಶಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಗುಬ್ಬಿಯ ಹೆಚ್ಚುವರಿ ಸಿವಿಲ್ ಜಡ್ಜ್ (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯವನ್ನು ಪ್ರಾರಂಭಿಸಲು ಆದೇಶಿಸಿದೆ.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ಪತ್ರದಲ್ಲಿ ಗುಬ್ಬಿಯ ಹೆಚ್ಚುವರಿ ಸಿವಿಲ್ ಜಡ್ಜ್ (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯವು ಮೇಲೆ ಕ್ರಮ ಸಂಖ್ಯೆ (1) ಮತ್ತು (2) ರಲ್ಲಿ ಓದಲಾದ ಸರ್ಕಾರದ ಆದೇಶಗಳನ್ವಯ ಸೃಜನೆಯಾಗಿ, ಕಾರ್ಯಾರಂಭಿಸಿರುತ್ತದೆ. ಸದರಿ ನ್ಯಾಯಾಲಯದಲ್ಲಿ ರಾಜ್ಯವನ್ನು ಪ್ರತಿನಿಧಿಸಿ ಪ್ರಕರಣಗಳನ್ನು ನಡೆಸಲು ಸದರಿ ನ್ಯಾಯಾಲಯಗಳಿಗೆ ಹೊಂದಿಕೊಂಡಂತೆ, ಅಭಿಯೋಗ ಇಲಾಖೆಗೆ ತಲಾ ಒಂದು ಸಹಾಯಕ ಸರ್ಕಾರಿ ಅಭಿಯೋಜಕರು–ವ–ಸಹಾಯಕ ಸರ್ಕಾರಿ ವಕೀಲರ, ಒಂದು ದ್ವಿತೀಯ ದರ್ಜೆ ಸಹಾಯಕ ಮತ್ತು ಒಂದು ಅಟೆಂಡರ್ ಹುದ್ದೆಯನ್ನು ಸೃಜನೆ ಮಾಡುವಂತೆ ಕೋರಿರುತ್ತಾರೆ.

ವಿಷಯವನ್ನು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಒಇ 118 ಪಿಪಿಇ 2008, ಬೆಂಗಳೂರು, ದಿನಾಂಕ: 5ನೇ ಆಗಸ್ಟ್ 2009**

ಮೇಲಿನ ವಿವರಿಸಿರುವ ಹಿನ್ನೆಲೆಯಲ್ಲಿ, ಗುಬ್ಬಿಯ ಹೆಚ್ಚುವರಿ ಸಿವಿಲ್ ಜಡ್ಜ್ (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಒಂದು ಸಹಾಯಕ ಸರ್ಕಾರಿ ಅಭಿಯೋಜಕರು–ವ–ಸಹಾಯಕ ಸರ್ಕಾರಿ ವಕೀಲರ ಹುದ್ದೆಯನ್ನು ಮತ್ತು ಅವರ ಕಛೇರಿಗೆ ಹೊಂದಿಕೊಂಡಂತೆ ಒಂದು ದ್ವಿತೀಯ ದರ್ಜೆ ಸಹಾಯಕರ (ಕಂಪ್ಯೂಟರ್ ಜ್ಞಾನವನ್ನು ಮತ್ತು ಬೆರಳಚ್ಚುಗಾರಿಕೆಯಲ್ಲಿ ನೈಪುಣ್ಯತೆ ಅಗತ್ಯ) ಬೆರಳಚ್ಚುಗಾರರಿಗೆ ಸರಿಸಮಾನದ ಹುದ್ದೆಯನ್ನಾಗಿ ಮೊದಲಬಾರಿಗೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಸೃಜಿಸಲಾಗಿದೆ.

ಸದರಿ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್.ಡಿ. 1 ಟಿಎಫ್‌ಪಿ 96, ದಿನಾಂಕ: 10.07.1996 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹಾಗೂ ಆರ್ಥಿಕ ಇಲಾಖೆಯ ಟಿಪ್ಪಣಿ ಸಂ. ಎಫ್.ಡಿ. 533 ವೆಚ್ಚ–11/2008, ದಿನಾಂಕ 25.06.2009 ಮತ್ತು ಎಫ್.ಡಿ. 647 ವೆಚ್ಚ–11/2009, ದಿನಾಂಕ: 17.07.2009ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ**

ಪಿ.ಆರ್. 1866 ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

(ಕಾ ಮತ್ತು ಸು ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

**ಕಂದಾಯ ಸಚಿವಾಲಯ**

**ವಿಷಯ:** ಬೆಂಗಳೂರು ನಗರ ಬಳೇಪೇಟೆ ಶ್ರೀ ಶ್ರೀನಿವಾಸ ಮಂದಿರ ಚಾರಿಟೀಸ್‌ನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಗೆ ಸೇರಿರುವ ಕುರಿತು.

**ಓದಲಾಗಿದೆ:** ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರ ಪತ್ರ ಸಂಖ್ಯೆ:ಎಡಿಎಂ.6.ಸಿಆರ್.54/2006–07, ದಿನಾಂಕ:02.11.2007

**ಪ್ರಸ್ತಾವನೆ:**

ಮೇಲೆ ಓದಲಾದ ಧಾರ್ಮಿಕ ದತ್ತಿ ಆಯುಕ್ತರ ಪತ್ರ ದಿನಾಂಕ: 02.11.2007 ರಲ್ಲಿ ಬೆಂಗಳೂರು ನಗರ ಶ್ರೀನಿವಾಸ ಮಂದಿರಂ ಚಾರಿಟೀಸ್‌ನ ಆಡಳಿತ ನಿರ್ವಹಣೆಗಾಗಿ ಸರ್ಕಾರದ ಆದೇಶ ಸಂ.679–85–182–31–8, ದಿನಾಂಕ:02.11.1932 ರನ್ವಯ ಪ್ರತ್ಯೇಕ ನಿಯಮಾವಳಿಯನ್ನು ರಚಿಸಲಾಗಿತ್ತು. ನಿಯಮಾವಳಿಗಳ ನಿಯಮ 5ರನ್ವಯ ಈ ಸಂಸ್ಥೆಗೆ ಧಾರ್ಮಿಕ ದತ್ತಿ ಆಯುಕ್ತರು 9 ಜನರ ವ್ಯವಸ್ಥಾಪನಾ ಸಮಿತಿಯನ್ನು ರಚಿಸಬೇಕೆಂದಿರುತ್ತದೆ. ನಿಯಮ 16 ರಂತೆ ಸದರಿ ಸಂಸ್ಥೆಯ ವ್ಯವಸ್ಥಾಪಾನಾ ಸಮಿತಿಯವರು ಮೈಸೂರು ಮತೀಯ ಮತ್ತು ಧರ್ಮದಾಯ ದತ್ತಿ ಸಂಸ್ಥೆಗಳ ಕಾಯ್ದೆ 1927ರ ಸೆಕ್ಷನ್ 6 ರಲ್ಲಿ ನಿರ್ಧಿಷ್ಟಪಡಿಸಿರುವಂತೆ ಕರ್ತವ್ಯ ನಿರ್ವಹಣೆ ನಿರ್ವಹಿಸಬೇಕೆಂದಿರುತ್ತದೆ.

ದಿನಾಂಕ 1.5.2003 ರಿಂದ ಜಾರಿಗೆ ಬಂದ ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮದಾಯ ದತ್ತಿಗಳ ಅಧಿನಿಯಮ 1997ರ ಸೆಕ್ಷನ್ 23ರನ್ವಯ ಈ ಸಂಸ್ಥೆಯನ್ನು ಅಧಿಸೂಚಿತ ಸಂಸ್ಥೆ ಎಂದು ಪ್ರಕಟಿಸಿರುವುದಿಲ್ಲ. ಸಂಸ್ಥೆಯ ಕಾರ್ಯದರ್ಶಿಗಳು ಮನವಿಯನ್ನು ಸಲ್ಲಿಸಿ, ಈ ಸಂಸ್ಥೆಗೆ ವ್ಯವಸ್ಥಾಪಾನಾ ಸಮಿತಿಯನ್ನು ರಚಿಸಲು ಕೋರಿದ್ದಾರೆ. ಸದರಿ ವಿಷಯದ ಬಗ್ಗೆ ಬೆಂಗಳೂರು ನಗರ ಸಭಾ ವಲಯದ ಸಹಾಯಕ ಆಯುಕ್ತರು, ಶ್ರೀ ಶ್ರೀನಿವಾಸ ಮಂದಿರಂ ಚಾರಿಟೀಸ್ ರೂ. 197.70 ತಸ್ಥೀಕ್ ನಿಗದಿಯಾಗಿರುತ್ತದೆ. ಸದರಿ ಸಂಸ್ಥೆಗೆ ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಇವರ ಅಧಿಸೂಚನೆ ದಿನಾಂಕ: 27.06.1972ರಲ್ಲಿ ಹಾಗೂ ದಿನಾಂಕ: 05.02.77ರಲ್ಲಿ 3 ವರ್ಷಗಳ ಅವಧಿಗೆ 12 ಸದಸ್ಯರನ್ನೊಳಗೊಂಡ ಧರ್ಮದರ್ಶಿಯ ಸಮಿತಿಯನ್ನು ರಚಿಸಲಾಗಿದೆ. ಸರ್ಕಾರದ ಆದೇಶ ಸಂ. ಕಂಇ 22 ಮುಸರ 97, ದಿನಾಂಕ: 04.02.1998ರಲ್ಲಿ 3 ವರ್ಷಗಳ ಅವಧಿಗೆ 9 ಸದಸ್ಯತರನ್ನೊಳಗೊಂಡ ಸಲಹಾ ಸಮಿತಿಯನ್ನು ರಚಿಸಿದ್ದು, ನಂತರದಲ್ಲಿ ಸಂಸ್ಥೆಯ ಆಡಳಿತಕ್ಕೆ ಸಮಿತಿಯನ್ನು ಪುನರ್ ರಚಿಸಿರುವುದು ಕಂಡುಬರುತ್ತಿಲ್ಲ. ಸಂಸ್ಥೆಯ ಲೆಕ್ಕಪತ್ರಗಳನ್ನು 1999–2000 ರಿಂದ 2004–05ರ ಸಾಲಿನವರೆಗೆ ಸಹಾಯಕ ನಿಯಂತ್ರಕರು, ಸ್ಥಳೀಯ ಲೆಕ್ಕ ಪರಿಶೋಧನಾ ವರ್ತುಲ, ಬೆಂಗಳೂರು, ಇವರು ಲೆಕ್ಕಪರಿಶೋಧನೆ ನಡೆಸಿರುವುದರಿಂದ ಕಂಡುಬರುತ್ತದೆ ಎಂದು ವರದಿ ಮಾಡಿರುತ್ತಾರೆ.

ಈ ಹಿನ್ನೆಲೆಯಲ್ಲಿ ಬೆಂಗಳೂರು ಬಳೇಪೇಟೆ ಶ್ರೀ ಶ್ರೀನಿವಾಸ ಮಂದಿರಂ ಸಂಸ್ಥೆಯ ಆಡಳಿತಕ್ಕೆ ಸರ್ಕಾರವು ನಿಯಮಾವಳಿಗಳನ್ನು ರೂಪಿಸಿದ್ದು, ಅದರ ಅನ್ವಯ ಆಡಳಿತ ನಡೆಸುತ್ತಿದ್ದು, ಸಂಸ್ಥೆಯ ಲೆಕ್ಕಪತ್ರಗಳನ್ನು ಸರ್ಕಾರದ ವತಿಯಿಂದ ಲೆಕ್ಕ ತಪಾಸಣೆ ನಡೆಸುತ್ತಿದ್ದರಿಂದ, ಸಂಸ್ಥೆಯ ಲೆಕ್ಕಪತ್ರಗಳನ್ನು ಸರ್ಕಾರದ ವತಿಯಿಂದ ಲೆಕ್ಕ ತಪಾಸಣೆ ನಡೆಸುತ್ತಿದ್ದರಿಂದ, ಸರ್ಕಾರದ ವತಿಯಿಂದ ಸಂಸ್ಥೆಯ ನಿರ್ವಹಣೆಗಾಗಿ ತಸ್ಥೀಕ್ ಅನುದಾನವನ್ನು ಪಾವತಿ ಮಾಡುತ್ತಿರುವುದರಿಂದ, ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮದಾಯ ದತ್ತಿಗಳ ಅಧಿನಿಯಮ 1997ರ ಸೆಕ್ಷನ್ 23ರ ಅನ್ವಯ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರಿಸಿ ಆದೇಶ ಹೊರಡಿಸಲು ಸರ್ಕಾರಕ್ಕೆ ಕೋರಿಕೆ ಸಲ್ಲಿಸಿರುತ್ತಾರೆ.

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 151 ಮುಅಬಿ 2007, ಬೆಂಗಳೂರು, ದಿನಾಂಕ: 3ನೇ ಆಗಸ್ಟ್ 2009**

ಬೆಂಗಳೂರು ನಗರ ಬಳೇಪೇಟೆ ಶ್ರೀ ಶ್ರೀನಿವಾಸ ಮಂದಿರ ಹೆಸರನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮದಾಯ ದತ್ತಿ ಅಧಿನಿಯಮ 1997ರ ಕಲಂ 23ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ ಕಂಇ 77 ಎಂಇಟಿ 2003 ದಿನಾಂಕ: 30.04.2003 ರಲ್ಲಿ ಪುಟ ಸಂಖ್ಯೆ 3ರ ಕ್ರಮ ಸಂಖ್ಯೆ 68ರ ನಂತರ 69ರಲ್ಲಿ ಸೇರ್ಪಡೆ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ. ರಾಮಚಂದ್ರಯ್ಯ**

ಪಿ.ಆರ್. 1867 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಮುಜರಾಯಿ)

**ವಿಷಯ:** ಬೆಂಗಳೂರು ನಗರ ಜಿಲ್ಲೆ, ದಕ್ಷಿಣ ತಾಲ್ಲೂಕು, ತಾವರೆಕೆರೆ ಹೋಬಳಿ, ಚೋಳನಾಯಕನಹಳ್ಳಿ ಗ್ರಾಮಕ್ಕೆ ಸೇರಿದ ಶ್ರೀ ಮಾರಮ್ಮ ದೇವಾಲಯವು ಧಾರ್ಮಿಕ ದತ್ತಿ ಇಲಾಖೆಗೆ ಸೇರಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರ ಪತ್ರ ಸಂಖ್ಯೆ ಏಕರೂಪ ಶಾಸನ:ಸಿ.ಆರ್.76/2008–09, ದಿನಾಂಕ: 24.03.2009

**ಪ್ರಸ್ತಾವನೆ:**

ಮೇಲೆ ಓದಲಾದ ಧಾರ್ಮಿಕ ದತ್ತಿ ಆಯುಕ್ತರ ಪತ್ರ ದಿನಾಂಕ: 24.03.2009ರಲ್ಲಿ ಬೆಂಗಳೂರು ನಗರ ಜಿಲ್ಲೆ, ದಕ್ಷಿಣ ತಾಲ್ಲೂಕು, ತಾವರೆಕೆರೆ ಹೋಬಳಿ, ಚೋಳನಾಯಕನಹಳ್ಳಿ ಗ್ರಾಮದ ಶ್ರೀ ಮಾರಮ್ಮ ದೇವಾಲಯವು ಮುಜರಾಯಿ ಇಲಾಖೆಗೆ ಒಳಪಟ್ಟ ಸಮೂಹ "ಸಿ" ಪ್ರವರ್ಗದ ಸಂಸ್ಥೆಯಾಗಿರುತ್ತದೆ. ಈ ದೇವಾಲಯಕ್ಕೆ ರೂ. 6,000/– ಪರಿಷ್ಕೃತ ತಸ್ಥೀಕ್ ನಿಗದಿಪಡಿಸಲಾಗಿರುತ್ತದೆ. ದೇವಾಲಯಕ್ಕೆ ಸುಮಾರು ರೂ. 10.00 ಲಕ್ಷಗಳ ಕಾಮಗಾರಿಯಾಗಿದ್ದು, ದೇವಾಲಯದ ಹುಂಡಿಯಿಂದ ವಾರ್ಷಿಕ ರೂ. 50,000/– ಆದಾಯ ಬರುತ್ತಿದೆ. ದೇವಾಲಯವು ಮುಜರಾಯಿ ಸಂಸ್ಥೆಯಾಗಿದ್ದರೂ, ಖಾಸಗಿ ಸಂಸ್ಥೆಯಂತೆ ನಡೆಯುತ್ತಿದೆಯೆಂದು, ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಕೈಬಿಟ್ಟು ಹೋಗಿದೆ ಎಂದು ತಹಶೀಲ್ದಾರ್‌ರವರು ವರದಿ ಮಾಡಿರುವುದರಿಂದ ಈ ದೇವಾಲಯವನ್ನು ಮುಜರಾಯಿ ಆಡಳಿತಕ್ಕೆ ಒಳಪಡಿಸಲು ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆರವರು ಕೋರಿರುತ್ತಾರೆ.

ಶ್ರೀ ಮಾರಮ್ಮ ದೇವಾಲಯವು ಮುಜರಾಯಿ ಸಂಸ್ಥೆಯಾಗಿದ್ದು, ಕೈಬಿಟ್ಟು ಹೋಗಿರುವುದರಿಂದ ಬೆಂಗಳೂರು ನಗರ ಜಿಲ್ಲೆ, ದಕ್ಷಿಣ ತಾಲ್ಲೂಕು, ತಾವರೆಕೆರೆ ಹೋಬಳಿ, ಚೋಳನಾಯಕನಹಳ್ಳಿ ಗ್ರಾಮ, ಶ್ರೀ ಮಾರಮ್ಮ ದೇವಾಲಯವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರಿಸುವಂತೆ ಸರ್ಕಾರಕ್ಕೆ ಕೋರಿಕೆ ಸಲ್ಲಿಸಿರುತ್ತಾರೆ.

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 57 ಮುಆಬಿ, 2009, ಬೆಂಗಳೂರು, ದಿನಾಂಕ: 3ನೇ ಆಗಸ್ಟ್ 2009**

ಬೆಂಗಳೂರು ನಗರ ಜಿಲ್ಲೆ, ದಕ್ಷಿಣ ತಾಲ್ಲೂಕು, ತಾವರೆಕೆರೆ ಹೋಬಳಿ, ಚೋಳನಾಯಕನಹಳ್ಳಿ ಗ್ರಾಮ, ಶ್ರೀ ಮಾರಮ್ಮ ದೇವಾಲಯದ ಹೆಸರನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮದಾಯ ದತ್ತಿ ಅಧಿನಿಯಮ 1997ರ ಕಲಂ 23ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ ಕಂಇ 77 ಎಂಇಟಿ 2003 ದಿನಾಂಕ: 30.04.2003 ರಲ್ಲಿನ ಪುಟ ಸಂಖ್ಯೆ 12ರ ಕ್ರಮ ಸಂಖ್ಯೆ 193 ನಂತರ 194 ರಲ್ಲಿ ಸೇರ್ಪಡೆ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1868

**ಜಿ. ರಾಮಚಂದ್ರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಮುಜರಾಯಿ)

**ವಿಷಯ:** ಬೆಂಗಳೂರು ನಗರ ಜಿಲ್ಲೆ, ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ಚಿಕ್ಕಬೊಮ್ಮಸಂದ್ರ ಗ್ರಾಮದ ಶ್ರೀ ಸೋಮೇಶ್ವರಸ್ವಾಮಿ ದೇವಾಲಯವನ್ನು ಅಧಿಸೂಚಿತ ಸಂಸ್ಥೆಯೆಂದು ಘೋಷಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರ ಪತ್ರ ಸಂಖ್ಯೆ ಏಕರೂಪ ಶಾಸನ:ಸಿ.ಆರ್.78/2008–09, ದಿನಾಂಕ: 26.03.2009.

**ಪ್ರಸ್ತಾವನೆ:**

ಮೇಲೆ ಓದಲಾದ ಧಾರ್ಮಿಕ ದತ್ತಿ ಆಯುಕ್ತರ ಪತ್ರ ದಿನಾಂಕ 26.03.2009ರಲ್ಲಿ ಬೆಂಗಳೂರು ನಗರ ಜಿಲ್ಲೆ, ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ಚಿಕ್ಕಬೊಮ್ಮಸಂದ್ರ ಗ್ರಾಮದ ಶ್ರೀ ಸೋಮೇಶ್ವರಸ್ವಾಮಿ ದೇವಾಲಯವನ್ನು ಶ್ರೀ ಕೆಂಪಣ್ಣ ಎಂಬುವವರು ಸ್ವಯಂ ಘೋಷಿತ ಅಧ್ಯಕ್ಷರು ಎಂದು ಹೇಳಿಕೊಂಡು ದೇವಾಲಯದ ಸೇವಾರ್ಥ ನಿಗದಿಪಡಿಸಿ, ಸೇವಾ ಹಣವನ್ನು ವಸೂಲಿ ಮಾಡುವುದು, ಹುಂಡಿಯನ್ನು ಅವರೇ ತೆರೆದು ಉಪಯೋಗಿಸುವುದು ಹಾಗೂ ದೇವಾಲಯಕ್ಕೆ ಸೇರಿದ ಜಾಗವನ್ನು ಸ್ವಂತಕ್ಕೆ ಉಪಯೋಗಿಸಿಕೊಳ್ಳುತ್ತಿರುವ ಬಗ್ಗೆ ಬಂದ ದೂರಿನ ಕುರಿತು ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ ಹಾಗೂ ಸಹಾಯಕ ಆಯುಕ್ತರು, ನಗರಸಭಾ ವಲಯ, ಬೆಂಗಳೂರು, ಇವರು ತನಿಖೆ ಮಾಡಿ ತನಿಖೆ ಸಮಯದಲ್ಲಿ ಶ್ರೀ ಕೆಂಪಣ್ಣ ಎಂಬುವವರು ಅನಧಿಕೃತವಾಗಿ ದೇವಾಲಯದ ಆಡಳಿತದಲ್ಲಿ ಕೈಹಾಕಿ ದೇವಾಲಯದ ಆದಾಯವನ್ನು ಸ್ವಂತಕ್ಕೆ ಬಳಸಿಕೊಳ್ಳುತ್ತಿದ್ದಾರೆಂದು, ದೇವಾಲಯದ ಆದಾಯಕ್ಕೆ ಯಾವುದೇ ಲೆಕ್ಕ ಪತ್ರಗಳು ಇಟ್ಟಿಲ್ಲವೆಂದು ವರದಿಯಲ್ಲಿ ತಿಳಿಸಿರುತ್ತಾರೆ.

ದೇವಾಲಯಕ್ಕೆ ತಸ್ಥೀಕ್ ಸಹ ನಿಗದಿಯಾಗಿರುತ್ತದೆ ಹಾಗೂ ಪ್ರಸ್ತುತ ದೇವಾಲಯದ ಆಡಳಿತವನ್ನು ಇಲಾಖೆಯ ವತಿಯಿಂದ ನಿರ್ವಹಿಸಬೇಕಾಗಿರುವುದರಿಂದ ಸಂಸ್ಥೆಯನ್ನು ಅಧಿಸೂಚಿತ ಸಂಸ್ಥೆಯೆಂದು ಘೋಷಿಸುವಂತೆ ಜಿಲ್ಲಾಧಿಕಾರಿಗಳು ಕೋರಿರುತ್ತಾರೆ. ಜಿಲ್ಲಾಧಿಕಾರಿಗಳ ವರದಿಯಂತೆ ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ಚಿಕ್ಕಬೊಮ್ಮಸಂದ್ರ ಗ್ರಾಮದ ಶ್ರೀ ಸೋಮೇಶ್ವರಸ್ವಾಮಿ ದೇವಾಲಯವನ್ನು ಘೋಷಿತ ಸಂಸ್ಥೆಯೆಂದು ಆದೇಶ ಹೊರಡಿಸುವಂತೆ ಧಾರ್ಮಿಕ ದತ್ತಿ ಆಯುಕ್ತರು ಸರ್ಕಾರಕ್ಕೆ ಕೋರಿಕೆ ಸಲ್ಲಿಸಿರುತ್ತಾರೆ.

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂ: ಕಂಇ 56 ಮುಆಬಿ 2009, ಬೆಂಗಳೂರು, ದಿನಾಂಕ: 3ನೇ ಆಗಸ್ಟ್ 2009**

ಬೆಂಗಳೂರು, ನಗರ ಜಿಲ್ಲೆ, ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ಚಿಕ್ಕಬೊಮ್ಮಸಂದ್ರ ಗ್ರಾಮದ ಶ್ರೀ ಸೋಮೇಶ್ವರಸ್ವಾಮಿ ದೇವಾಲಯವನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು, ಮತ್ತು ಧರ್ಮದಾಯ ದತ್ತಿ ಅಧಿನಿಯಮ 1997ರ ಕಲಂ 23ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ ಕಂಇ 77 ಎಂಇಟಿ 2003 ದಿನಾಂಕ:30.04.2003 ರಲ್ಲಿನ ಪುಟ ಸಂಖ್ಯೆ 9ರಲ್ಲಿ ಕ್ರಮ ಸಂಖ್ಯೆ 167ರ ನಂತರ 168 ರಲ್ಲಿ ಸೇರ್ಪಡೆ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1869

**ಜಿ. ರಾಮಚಂದ್ರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಮುಜರಾಯಿ)

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ಜನರಿಗೆ ಭೂಮಿ ಖರೀದಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಕಇ 168 ಎಸ್‌ಡಿಸಿ 2000 ದಿನಾಂಕ: 4.8.2000.

2) ಸರ್ಕಾರಿ ಆದೇಶ ಸಂಖ್ಯೆ: ಸಕಇ 42 ಎಸ್‌ಡಿಸಿ 2004 ದಿನಾಂಕ: 6.6.2006.

3) ಸರ್ಕಾರಿ ಆದೇಶ ಸಂಖ್ಯೆ: ಸಕಇ 80 ಎಸ್‌ಡಿಸಿ 2007 ದಿನಾಂಕ: 21.08.2007.

**ಪ್ರಸ್ತಾವನೆ:**

ಭೂ ಒಡೆತನದ ಯೋಜನೆಯು 1990–91ನೇ ಸಾಲಿನಿಂದ ಜಾರಿಯಲ್ಲಿದ್ದು, ಈ ಯೋಜನೆ ಅಡಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಕ್ಕೆ ಸೇರಿರ ಪ್ರತಿ ಫಲಾನುಭವಿಗೆ 2.00 ಎಕರೆ ಖುಷ್ಕಿ ಭೂಮಿ ಅಥವಾ 1.00 ಎಕರೆ ನೀರಾವರಿ ಭೂಮಿ ಖರೀದಿಸಲು ಅವಕಾಶವಿದೆ. ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಘಟಕ ವೆಚ್ಚವನ್ನು ರೂ. 50,000.00 ರಿಂದ ರೂ. 60,000.00 ಗೆ ಹೆಚ್ಚಿಸಲಾಗಿದ್ದು ಅಂತಹ ಮೊತ್ತದಲ್ಲಿ ಶೇಕಡ 50 ರಷ್ಟು ಸಹಾಯಧನ ಹಾಗೂ ಉಳಿದ ಶೇಕಡ 50 ರಷ್ಟು ಅವಧಿ ಸಾಲವಾಗಿರುತ್ತದೆ. ರಾಜ್ಯದಲ್ಲಿ ಪ್ರತಿ ಹಳ್ಳಿಗೆ ನೋಂದಣಿ ಇಲಾಖೆ ನಿಗದಿಪಡಿಸಿರುವ ಮಾರ್ಗಸೂಚಿ ಬೆಲೆಗೆ ಅನುಗುಣವಾಗಿ ಭೂಮಿ ಖರೀದಿಸಲು ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ಮಂಜೂರಾತಿ ನೀಡಲಾಗಿತ್ತು. ಅಂತಹ ಮಾರ್ಗಸೂಚಿ ಬೆಲೆಗೆ ಭೂಮಿ ಲಭ್ಯವಾಗದಿದ್ದಲ್ಲಿ ಮಾರ್ಗಸೂಚಿ ಬೆಲೆಯ ಮೇಲೆ ಶೇಕಡ 25ರಷ್ಟು ಹೆಚ್ಚುವರಿಯಾಗಿ ಪಾವತಿಸಲು ಮೇಲೆ (3) ರಲ್ಲಿ ಓದಲಾದ ಆದೇಶದ ಪ್ರಕಾರ ಅವಕಾಶವಿರುತ್ತದೆ.

ಆದಾಗ್ಯೂ ರಾಜ್ಯದ ಕೆಲವು ಜಿಲ್ಲೆಗಳಲ್ಲಿ (ಅಂದರೆ ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಬೆಳಗಾವಿ, ಬಳ್ಳಾರಿ, ಚಾಮರಾಜನಗರ, ಮೈಸೂರು, ಮಂಡ್ಯ, ಕೊಡಗು) ಹಾಲಿ ಜಾರಿಯಲ್ಲಿರುವ ಅಂತಹ ಬೆಲೆಗೆ ಸಾಕಷ್ಟು ಭೂಮಿ ಲಭ್ಯವಾಗುತ್ತಿಲ್ಲ ಎಂಬುದಾಗಿ ವ್ಯವಸ್ಥಾಪಕ ನಿರ್ದೇಶಕರು, ಡಾ: ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮ ನಿಯಮಿತ ಹಾಗೂ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮ ನಿಯಮಿತ ಇವರು ತಿಳಿಸಿರುತ್ತಾರೆ.

ಆ ಹಿನ್ನೆಲೆಯಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂ: ಸಕಇ 80 ಎಸ್‌ಡಿಸಿ 2007, ಬೆಂಗಳೂರು, ದಿನಾಂಕ: 5ನೇ ಆಗಸ್ಟ್ 2009**

ಭೂ ಒಡೆತನ ಯೋಜನೆ ಅಡಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ಫಲಾನುಭವಿಗಳಿಗೆ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ರಚಿಸಲಾದ ಸಮಿತಿಯ ಮುಖಾಂತರ ಭೂಮಿ ಖರೀದಿಸುವುದರ ಘಟಕ ವೆಚ್ಚವನ್ನು ನೋಂದಾಯಿತ ಬೆಲೆಯ ಎರಡು ಪಟ್ಟುವರೆಗೆ ಏರಿಸಿ ಘಟಕ ವೆಚ್ಚದ ಗರಿಷ್ಠ ಮಿತಿ ರೂ. 2.50 ಲಕ್ಷಗಳನ್ನು ಮೀರದಂತೆ ಖರೀದಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಒಂದು ಪಕ್ಷ, ಈ ಬೆಲೆಯು ನೋಂದಾಯಿತ ಬೆಲೆಯ ಎರಡು ಪಟ್ಟಿಗಿಂತ ಹೆಚ್ಚಾಗಿದ್ದಲ್ಲಿ ಅಂತಹ ಪ್ರಕರಣಗಳಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ, ಇವರ ಅನುಮೋದನೆ ಪಡೆಯಲು ಸರ್ಕಾರದಲ್ಲಿ ಸಮಾಜ ಕಲ್ಯಾಣ ಇಲಾಖೆಗೆ ಪ್ರಸ್ತಾವನೆ ಸಲ್ಲಿಸತಕ್ಕದ್ದು.

ಮೇಲ್ಕಂಡ ಅಂಶಗಳನ್ನು ಹೊರತುಪಡಿಸಿ ಭೂ ಒಡೆತನ ಯೋಜನೆಯ ಇತರೆ ಷರತ್ತುಗಳು ಈ ಹಿಂದೆ ಇದ್ದಂತೆ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1876

**ಬಿ. ರಾಮಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ–2 (ಪ್ರ), ಸಮಾಜ ಕಲ್ಯಾಣ ಇಲಾಖೆ.

**ನಗರಾಭಿವೃದ್ಧಿ ಸಚಿವಾಲಯ**

**ವಿಷಯ:** ನಗರ ಯೋಜನಾ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ವಿವಿಧ ಕಛೇರಿಗಳ ಯೋಜನಾ ವಿಭಾಗಗಳನ್ನು/ ಹುದ್ದೆಗಳನ್ನು ದಿನಾಂಕ: 1–4–2009 ರಿಂದ ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂ:ನಅಇ 33 ಎಂಎನ್‌ಟಿ 96(1) ದಿನಾಂಕ:26–8–89

2) ಸರ್ಕಾರಿ ಆದೇಶ ಸಂ:ನಅಇ 33 ಎಂಎನ್‌ಟಿ 96(2) ದಿನಾಂಕ:26–8–99.

3) ಸರ್ಕಾರಿ ಆದೇಶ ಸಂ:ನಅಇ 33 ಎಂಎನ್‌ಟಿ 96(3) ದಿನಾಂಕ:26–8–99

4) ಸರ್ಕಾರಿ ಆದೇಶ ಸಂ:ನಅಇ 33 ಎಂಎನ್‌ಟಿ 96(4) ದಿನಾಂಕ:26–8–98

5) ಸರ್ಕಾರಿ ಆದೇಶ ಸಂ:ನಅಇ 33 ಎಂಎನ್‌ಟಿ 96(5) ದಿನಾಂಕ:26–8–99

6) ಸರ್ಕಾರಿ ಆದೇಶ ಸಂ:ನಅಇ 33 ಎಂಎನ್‌ಟಿ 96 ದಿನಾಂಕ:19–8–2000

7) ಸರ್ಕಾರಿ ಆದೇಶ ಸಂ:ನಅಇ 33 ಎಂಎನ್‌ಟಿ 96(ಭಾ) ದಿನಾಂಕ:2–8–2001

8) ಸರ್ಕಾರಿ ಆದೇಶ ಸಂ:ನಅಇ 33 ಎಂಎನ್‌ಟಿ 96(ಭಾ) ದಿನಾಂಕ:3–7–2002

9) ಸರ್ಕಾರಿ ಆದೇಶ ಸಂ:ನಅಇ 33 ಎಂಎನ್‌ಟಿ 03 ದಿನಾಂಕ:13–2–2003

10) ಕಡತ ಸಂ:ನಯೋ:ಸಿ(1):1450.ಕ.ಮು.ವೆ.2003 ದಿನಾಂಕ:19–1–2004 ನಿರ್ದೇಶಕರು, ನಗರ ಯೋಜನಾ ಇಲಾಖೆ, ಬೆಂಗಳೂರು.

11) ಸರ್ಕಾರಿ ಆದೇಶ ಸಂ:ನಅಇ 56 ನಯೋಸೇ 04 ದಿನಾಂಕ:6–4–2004

12) ಸರ್ಕಾರಿ ಆದೇಶ ಸಂ:ನಅಇ 25 ನಯೋಸೇ 05 ದಿನಾಂಕ:6–3–2005.

13) ಸರ್ಕಾರಿ ಆದೇಶ ಸಂ:ನಅಇ 52 ನಯೋಸೇ 06 ದಿನಾಂಕ:22–6–2006.

14) ಸರ್ಕಾರಿ ಆದೇಶ ಸಂ.ನಅಇ 84 ನಯೋಸೇ 07, ದಿನಾಂಕ:23–06–07.

15) ಸರ್ಕಾರಿ ಆದೇಶ ಸಂ.ನಅಇ 48 ನಯೋಸೇ 08, ದಿನಾಂಕ:22–06–08.

16) ನಗರ ಯೋಜನಾ ನಿರ್ದೇಶನಾಲಯದ ಏಕ ಕಡತ ಸಂಖ್ಯೆ: ನಯೋ:ಸಿ(2)ಕಮುವ:08–09, ದಿನಾಂಕ:23–03–09.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1) ರಿಂದ (15) ರವರೆಗಿನ ಸರ್ಕಾರಿ ಆದೇಶಗಳಲ್ಲಿ ನಗರ ಯೋಜನಾ ಇಲಾಖೆಯ ವಿವಿಧ ಕಛೇರಿಗಳ ಯೋಜನಾ ವಿಭಾಗಗಳು/ಹುದ್ದೆಗಳನ್ನು ದಿನಾಂಕ: 01–04–2008 ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿತ್ತು.

ಮೇಲ್ಕಂಡ ಸರ್ಕಾರಿ ಆದೇಶಗಳಲ್ಲಿ ಹೇಳಲಾಗಿರುವ ಯೋಜನೆಯ ಎಲ್ಲಾ ಸಿಬ್ಬಂದಿ ವರ್ಗದವರನ್ನು ಶಾಶ್ವತವಾಗಿ ಮುಂದುವರೆಸುವ ಪ್ರಸ್ತಾವನೆಯು ಸರ್ಕಾರದ ಪರಿಶೀಲನೆಯಲ್ಲಿದೆ.

ನಿರ್ದೇಶಕರು ನಗರ ಯೋಜನಾ ಇಲಾಖೆ, ಬೆಂಗಳೂರು ಇವರು ನಗರ ಯೋಜನಾ ವಿವಿಧ ಕಛೇರಿಗಳಿಗೆ ಮಂಜೂರಾಗಿರುವ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ: 01–04–2009 ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರೆಸುವಂತೆ ಕೋರಿರುತ್ತಾರೆ. ಈ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಲಾಗಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ:ನಅಇ 46 ನಯೋಸೇ 2009, ಬೆಂಗಳೂರು, ದಿನಾಂಕ: 3ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ನಗರ ಯೋಜನಾ ಇಲಾಖೆಯಲ್ಲಿನ ಈ ಕೆಳಕಂಡ ಯೋಜನಾ ವಿಭಾಗಗಳ ಕಛೇರಿಗಳ ಹಾಗೂ ಅವುಗಳ ಎದುರಾಗಿ ನಮೂದಿಸಿರುವ ಹುದ್ದೆಗಳನ್ನು ದಿನಾಂಕ 01–04–2009 ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸಿ ಆದೇಶಿಸಿದೆ.

| ಕ್ರ ಸಂ | ಕಛೇರಿಯ ಹೆಸರು | ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|---|
| 1 | ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರ ಕಛೇರಿ, ಬೆಂಗಳೂರು. | ಶೀಘ್ರಲಿಪಿಗಾರರು | 1 |
| | | ಬೆರಳಚ್ಚುಗಾರರು | 1 |
| | | **ಒಟ್ಟು** | **2** |
| 2 | ನಗರ ಮತ್ತು ಗ್ರಾಮಾಂತರ ಯೋಜನಾ ಹೆಚ್ಚುವರಿ ನಿರ್ದೇಶಕರ ವಲಯ ಕಛೇರಿ, ಧಾರವಾಡ | ನಗರ ಮತ್ತು ಗ್ರಾ ಯೋಜನಾ ಹೆಚ್ಚುವರಿ ನಿರ್ದೇಶಕರು | 1 |
| | | ನಗರ ಮತ್ತು ಗ್ರಾ ಯೋಜನಾ ಸಹಾಯಕ ನಿರ್ದೇಶಕರು | 1 |
| | | ನಗರ ಯೋಜಕ | 1 |

| ಕ್ರ ಸಂ | ಕಛೇರಿಯ ಹೆಸರು | ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|---|
| | ನಗರ ಮತ್ತು ಗ್ರಾಮಾಂತರ ಯೋಜನಾ ಹೆಚ್ಚುವರಿ ನಿರ್ದೇಶಕರ ವಲಯ ಕಛೇರಿ, ಧಾರವಾಡ | ಸಹಾಯಕ ನಗರ ಯೋಜಕ | 2 |
| | | ಛಾಯಾ ಮುದ್ರಕರು | 1 |
| | | ಕಛೇರಿ ಅಧೀಕ್ಷಕರು | 1 |
| | | ವ್ಯವಸ್ಥಾಪಕರು | 1 |
| | | ಪ್ರಥಮ ದರ್ಜೆ ಸಹಾಯಕರು | 3 |
| | | ದ್ವಿತೀಯ ದರ್ಜೆ ಸಹಾಯಕರು | 2 |
| | | ಶೀಘ್ರಲಿಪಿಗಾರರು | 1 |
| | | ಬೆರಳಚ್ಚುಗಾರರು | 1 |
| | | ವಾಹನ ಚಾಲಕರು | 1 |
| | | ಅನುಚಾರಕ | 1 |
| | | ಗ್ರೂಪ್–ಡಿ | 3 |
| | | **ಒಟ್ಟು** | **20** |
| 3 | ನಗರ ಮತ್ತು ಗ್ರಾಮಾಂತರ ಯೋಜನಾ ಉಪ ನಿರ್ದೇಶಕರು, ಯೋಜನಾ ವಿಭಾಗ, ಬೆಂಗಳೂರು. | ನಗರ ಮತ್ತು ಗ್ರಾ. ಯೋಜನಾ ಉಪ ನಿರ್ದೇಶಕರು | 1 |
| | | ನಗರ ಮತ್ತು ಗ್ರಾ. ಯೋಜನಾ ಸಹಾಯಕ ನಿರ್ದೇಶಕರು | 1 |
| | | ಶೀಘ್ರಲಿಪಿಗಾರರು | 1 |
| | | ಬೆರಳಚ್ಚುಗಾರರು | 1 |
| | | ವಾಹನ ಚಾಲಕರು | 1 |
| | | **ಒಟ್ಟು** | **5** |
| 4 | ನಗರ ಮತ್ತು ಗ್ರಾಮಾಂತರ ಯೋಜನಾ ಉಪ ನಿರ್ದೇಶಕರು, ವಿನ್ಯಾಸ ವಿಭಾಗ, ಬೆಂಗಳೂರು | ನಗರ ಮತ್ತು ಗ್ರಾ. ಯೋಜನಾ ಉಪ ನಿರ್ದೇಶಕರು | 1 |
| | | ಶೀಘ್ರಲಿಪಿಗಾರರು | 1 |
| | | ಪ್ರಥಮ ದರ್ಜೆ ಸಹಾಯಕರು | 1 |
| | | ವಾಹನ ಚಾಲಕರು | 1 |
| | | ಗ್ರೂಪ್–ಡಿ | 1 |
| | | **ಒಟ್ಟು** | **5** |
| 5 | ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರ ಕಛೇರಿ, ಬಳ್ಳಾರಿ | ನಗರ ಮತ್ತು ಗ್ರಾ. ಯೋಜನಾ ಸಹಾಯಕ ನಿರ್ದೇಶಕರು | 1 |
| | | ಪ್ರಥಮ ದರ್ಜೆ ಸಹಾಯಕರು | 1 |
| | | ಬೆರಳಚ್ಚುಗಾರರು | 1 |
| | | ವಾಹನ ಚಾಲಕರು | 1 |
| | | ಮೋಜಣಿ ಸಹಾಯಕರು | 3 |
| | | ಸೇವಕ | 1 |
| | | **ಒಟ್ಟು** | **8** |
| 6 | ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರ ಕಛೇರಿ, ಚಿತ್ರದುರ್ಗ | ನಗರ ಮತ್ತು ಗ್ರಾ. ಯೋಜನಾ ಸಹಾಯಕ ನಿರ್ದೇಶಕರು | 1 |
| | | ನಗರ ಯೋಜಕ | 1 |
| | | ಸಹಾಯಕ ನಗರ ಯೋಜಕ | 1 |
| | | ಪ್ರಥಮ ದರ್ಜೆ ಸಹಾಯಕರು | 1 |
| | | ಬೆರಳಚ್ಚುಗಾರ | 1 |
| | | ವಾಹನ ಚಾಲಕರು | 1 |
| | | ಮೋಜಣಿ ಸಹಾಯಕರು | 2 |
| | | ಸೇವಕ | 1 |
| | | **ಒಟ್ಟು** | **9** |

| ಕ್ರ ಸಂ | ಕಛೇರಿಯ ಹೆಸರು | ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|---|
| 7 | ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರ ಕಛೇರಿ, ಶಿರಸಿ | ನಗರ ಮತ್ತು ಗ್ರಾ. ಯೋಜನಾ ಸಹಾಯಕ ನಿರ್ದೇಶಕರು | 1 |
| | | ಪ್ರಥಮ ದರ್ಜೆ ಸಹಾಯಕರು | 1 |
| | | ಬೆರಳಚ್ಚುಗಾರರು | 1 |
| | | ಒಟ್ಟು | **3** |
| 8 | ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರ ಕಛೇರಿ, ಬಾಗಲಕೋಟೆ | ನಗರ ಮತ್ತು ಗ್ರಾ. ಯೋಜನಾ ಸಹಾಯಕ ನಿರ್ದೇಶಕರು | 1 |
| | | ರೇಖಕ | 1 |
| | | ಪ್ರಥಮ ದರ್ಜೆ ಸಹಾಯಕರು | 1 |
| | | ಬೆರಳಚ್ಚುಗಾರರು | 1 |
| | | ಒಟ್ಟು | **4** |
| 9 | ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರ ಕಛೇರಿ, ಕೋಲಾರ | ನಗರ ಮತ್ತು ಗ್ರಾ. ಯೋಜನಾ ಸಹಾಯಕ ನಿರ್ದೇಶಕರು | 1 |
| | | ಸಹಾಯಕ ನಗರ ಯೋಜಕ | 1 |
| | | ಪ್ರಥಮ ದರ್ಜೆ ಸಹಾಯಕರು | 1 |
| | | ಬೆರಳಚ್ಚುಗಾರ | 1 |
| | | ಛಾಯಾಮುದ್ರಕ | 1 |
| | | ವಾಹನ ಚಾಲಕರು | 1 |
| | | ಒಟ್ಟು | **6** |
| 10 | ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರ ಕಛೇರಿ, ಗದಗ | ನಗರ ಮತ್ತು ಗ್ರಾ. ಯೋಜನಾ ಸಹಾಯಕ ನಿರ್ದೇಶಕರು | 1 |
| | | ಸಹಾಯಕ ನಗರ ಯೋಜಕ | 3 |
| | | ರೇಖಕ | 1 |
| | | ಪ್ರಥಮ ದರ್ಜೆ ಸಹಾಯಕರು | 1 |
| | | ಗ್ರೂಪ್–ಡಿ | 1 |
| | | ಒಟ್ಟು | **7** |
| 11 | ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರ ಕಛೇರಿ, ಉಡುಪಿ | ನಗರ ಮತ್ತು ಗ್ರಾ. ಯೋಜನಾ ಸಹಾಯಕ ನಿರ್ದೇಶಕರು | 1 |
| | | ನಗರ ಯೋಜಕ | 2 |
| | | ಸಹಾಯಕ ನಗರ ಯೋಜಕ | 1 |
| | | ಛಾಯಾಮುದ್ರಕ | 1 |
| | | ಪ್ರಥಮ ದರ್ಜೆ ಸಹಾಯಕರು | 1 |
| | | ಬೆರಳಚ್ಚುಗಾರ | 1 |
| | | ವಾಹನ ಚಾಲಕರು | 1 |
| | | ಗ್ರೂಪ್–ಡಿ | 3 |
| | | ಒಟ್ಟು | **11** |
| 12 | ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರ ಕಛೇರಿ, ಧಾರವಾಡ | ಬೆರಳಚ್ಚುಗಾರ | 1 |
| | | ಗ್ರೂಪ್–ಡಿ | 1 |
| | | ಒಟ್ಟು | **2** |
| 13 | ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರ ಕಛೇರಿ, ದಾವಣಗೆರೆ | ಪ್ರಥಮ ದರ್ಜೆ ಸಹಾಯಕ | 1 |
| | | ಬೆರಳಚ್ಚುಗಾರ | 1 |
| | | ಒಟ್ಟು | **2** |

| ಕ್ರ ಸಂ | ಕಛೇರಿಯ ಹೆಸರು | ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|---|
| 14 | ನಗರ ಯೋಜನಾ ಸಹಾಯಕ ನಿರ್ದೇಶಕರ ಕಛೇರಿ, ರಾಯಚೂರು | ಬೆರಳಚ್ಚುಗಾರ | 1 |
| | | ಒಟ್ಟು | **1** |

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2217–ನಗರಾಭಿವೃದ್ಧಿ–05 ಇತರೆ ನಗರಾಭಿವೃದ್ಧಿ ಯೋಜನೆಗಳು–001– ನಿರ್ದೇಶನ ಮತ್ತು ಆಡಳಿತ–1–01ರ ಅಡಿಯಲ್ಲಿ 2009–10 ರ ಸಾಲಿನಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಇಲಾಖಾ ಕಾರ್ಯದರ್ಶಿಗಳಿಗೆ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10–7–96 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1879

**ಎಸ್.ಎನ್. ಕೃಷ್ಣಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಎಂ. ವಿಜಯಚಂದ್ರ ಮತ್ತು ಶ್ರೀ ಎಂ. ಎಸ್. ವೆಂಕಟೇಶ್‌ಮೂರ್ತಿ, ಹಿಂದಿನ ಕಾರ್ಯನಿರ್ವಾಹಕ ಅಧಿಕಾರಿಗಳು, ಶ್ರೀ ಮೂಕಾಂಬಿಕಾ ದೇವಸ್ಥಾನ, ಕೊಲ್ಲೂರು, ಇವರ ಮೇಲಿನ ಆರೋಪಗಳ ಬಗ್ಗೆ ಜಂಟಿ ಇಲಾಖಾ ವಿಚಾರಣೆ – ಅಂತಿಮ ಆದೇಶ.

**ಓದಲಾಗಿದೆ:**
1) ಸರ್ಕಾರದ ತಿಳುವಳಿಕೆ ಪತ್ರ ಸಂಖ್ಯೆ. ಕಂಇ 120 ಎಂಇಟಿ 95 ದಿ: 29.03.2000.
2) ಶ್ರೀ ಎಂ.ಎಸ್. ವೆಂಕಟೇಶ್‌ಮೂರ್ತಿ, ಹಿಂದಿನ ಕಾರ್ಯನಿರ್ವಾಹಕ ಅಧಿಕಾರಿ ಇವರ ಲಿಖಿತ ಹೇಳಿಕೆ ದಿನಾಂಕ: 24.04.2000.
3) ಶ್ರೀ ಎಂ. ವಿಜಯಚಂದ್ರ ಇವರ ಲಿಖಿತ ಹೇಳಿಕೆ ದಿನಾಂಕ : 15.05.2000
4) ಸರ್ಕಾರದ ಆದೇಶ ಸಂಖ್ಯೆ : ಕಂಇ 120 ಎಂಇಟಿ 95 ದಿನಾಂಕ : 19.03.2001
5) ವಿಚಾರಣಾಧಿಕಾರಿಗಳು ವಿಚಾರಣಾ ವರದಿ ದಿನಾಂಕ : 31.05.2002

**ಪ್ರಸ್ತಾವನೆ:**

ಉಡುಪಿ ಜಿಲ್ಲೆ, ಕುಂದಾಪುರ ತಾಲ್ಲೂಕಿನ ಕೊಲ್ಲೂರು ಶ್ರೀ ಮೂಕಾಂಬಿಕಾ ದೇವಾಲಯದ ಸೇವಾ ವಿಭಾಗದಲ್ಲಿ ರೂ.4,57,301/– ಗಳು ದುರುಪಯೋಗವಾಗಿರುವುದು ದಿನಾಂಕ: 01.01.93 ರಿಂದ 30.06.95 ರವರೆಗಿನ ಲೆಕ್ಕ ಪತ್ರಗಳನ್ನು ವಿಶೇಷ ಲೆಕ್ಕ ಪರಿಶೋಧನಾಧಿಕಾರಿಗಳು ಮಾಡಿದ ಆಡಿಟ್ ವರದಿಯಿಂದ ತಿಳಿದು ಬಂದ ಕಾರಣ ಸದರಿ ಅವಧಿ ದಿನಾಂಕ:01.01.93 ರಿಂದ 30.06.95 ರವರೆಗೆ ಈ ಕೆಳಕಂಡ ಅಧಿಕಾರಿಗಳು ಸದರಿ ದೇವಾಲಯದ ಸೇವಾ ವಿಭಾಗದಲ್ಲಿ ಕಾರ್ಯನಿರ್ವಹಣಾಧಿಕಾರಿಗಳಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ಅವರುಗಳಿಂದ ಈ ಕೆಳಕಂಡಂತೆ ಹಣ ದುರುಪಯೋಗವಾಗಿರುತ್ತದೆಂದು:

| ಕ್ರ. ಸಂ. | ಅಧಿಕಾರಿಗಳ ಹೆಸರು | ದುರುಪಯೋಗವಾಗಿರುವ ಹಣ |
|---|---|---|
| 1. | ಶ್ರೀ ರಾಮಾಜಿ ಹೆಗ್ಡೆ<br>ದಿನಾಂಕ:01.01.93 ರಿಂದ 30.06.93 ರವರೆಗೆ | ರೂ. 93,850/– |
| 2. | ಶ್ರೀ ಎಂ. ವಿಜಯಚಂದ್ರ<br>ದಿನಾಂಕ:01.07.93 ರಿಂದ 27.10.93 ರವರೆಗೆ | ರೂ. 5,201/– |
| 3. | ಶ್ರೀ ಎಂ.ಎಸ್. ವೆಂಕಟೇಶ್‌ಮೂರ್ತಿ<br>ದಿನಾಂಕ:28.10.93 ರಿಂದ 30.06.95 ರವರೆಗೆ | ರೂ. 3,58,250/– |

ಈ ಮೇಲ್ಕಂಡ 3 ಜನ ಅಧಿಕಾರಿಗಳ ಪೈಕಿ ಶ್ರೀ ರಾಮಾಜಿ ಹೆಗ್ಡೆರವರು ಸೇವೆಯಿಂದ ನಿವೃತ್ತಿ ಹೊಂದಿರುವುದರಿಂದ ಹಾಗೂ ದುರುಪಯೋಗದ ಘಟನೆ ನಡೆದು 4 ವರ್ಷಗಳಿಗೂ ಮೇಲ್ಪಟ್ಟಿರುವುದರಿಂದ ಸದರಿಯವರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ನಿಯಮಗಳಲ್ಲಿ ತೊಡಕುಂಟಾಗಿರುವುದರಿಂದ ಸದರಿಯವರಿಂದ ದುರುಪಯೋಗವಾಗಿರುವ ಮೊತ್ತದ ವಸೂಲಿ ಬಗ್ಗೆ ಪ್ರತ್ಯೇಕ ಕ್ರಮ ಕೈಗೊಳ್ಳುತ್ತಿದೆಯೆಂದು, ಶ್ರೀ ಎಂ.ವಿಜಯಚಂದ್ರ ಮತ್ತು ಶ್ರೀ ಎಂ.ಎಸ್. ವೆಂಕಟೇಶ್‌ಮೂರ್ತಿ ಇವರುಗಳಿಗೆ ಮೇಲೆ (1) ರಲ್ಲಿ ಓದಲಾದ ತಿಳುವಳಿಕೆ ಪತ್ರದಲ್ಲಿ ದೋಷಾರೋಪಣಾ ಪಟ್ಟಿಯನ್ನು ಜಾರಿ ಮಾಡಲಾಗಿತ್ತು.

ಶ್ರೀ ಎಂ.ಎಸ್. ವೆಂಕಟೇಶ್‌ಮೂರ್ತಿ ಇವರು ಮೇಲೆ (2) ರಲ್ಲಿ ಓದಲಾದ ದಿನಾಂಕ: 24.04.2000ರ ತಮ್ಮ ಲಿಖಿತ ಹೇಳಿಕೆಯಲ್ಲಿ ಶ್ರೀ ರಾಮ್‌ಜಿ ಹೆಗ್ಡೆಯವರು ಶ್ರೀ ವಿಜಯಚಂದ್ರರವರಿಗೆ ದಿನಾಂಕ: 30.06.93 ರಂದು ಪ್ರಭಾರ ವಹಿಸಿಕೊಡುವಾಗ ದೇವಳಕ್ಕೆ ಜಮಾ ಆಗಲು ರೂ. 1,40,715/– ಗಳು ಬಾಕಿ ಇರುವ ಬಗ್ಗೆ ದಾಖಲಿಸಿರುತ್ತಾರೆ. ದಿನಾಂಕ: 28.10.93 ರಂದು ಶ್ರೀ ವಿಜಯಚಂದ್ರರವರು ತನಗೆ ಪ್ರಭಾರ ವಹಿಸಿಕೊಡುವಾಗ ರೂ. 2,74,408/–ಗಳು ಬಾಕಿ ಇರುವುದನ್ನು ದಾಖಲಿಸಿದ್ದಾರೆ; ಆದುದರಿಂದ ಒಟ್ಟು ಮೊಬಲಗು ರೂ. 3,58,250/– ಗಳಲ್ಲಿ ರೂ. 2,74,400/– ಗಳು ತನಗೆ ಪ್ರಭಾರ ವಹಿಸಿಕೊಡುವ ಮೊದಲೇ ದುರುಪಯೋಗವಾಗಿರುವುದು ಸ್ಪಷ್ಟವಾಗಿರುತ್ತದೆ. ಈ ದುರುಪಯೋಗವು ದಿನಾಂಕ: 01.01.93 ರಿಂದಲೇ ಪ್ರಾರಂಭವಾಗಿರುವುದು ಲೆಕ್ಕ ಪರಿಶೋಧನೆಯಿಂದ ತಿಳಿದುಬರುತ್ತದೆ; ಆದುದರಿಂದ ಸದರಿ ಹಣ ದುರುಪಯೋಗವು ತನ್ನ ಅವಧಿಯಲ್ಲಿ ನಡೆದಿರುವುದಿಲ್ಲವೆಂದು ತಾನು ಪ್ರಭಾರ ಕಾರ್ಯನಿರ್ವಾಹಕ ಅಧಿಕಾರಿಯಾಗಿ ಕೆಲಸ ನಿರ್ವಹಿಸಿದ ಅವಧಿಯಲ್ಲಿ ದುರುಪಯೋಗವಾಗಿರುವ ಬಗ್ಗೆ ಇರುವ ಮೊಬಲಗು ದಿನಾಂಕ: 15.05.95 ರಿಂದ ರಶೀದಿ ನಂ. 295 ರಲ್ಲಿ ರೂ. 33,117–00 ಗಳನ್ನು ದಿನಾಂಕ: 13.06.95 ರಲ್ಲಿ ರಶೀದಿ ನಂ. 334 ರಲ್ಲಿ ರೂ. 40,000/– ಗಳನ್ನು ಮತ್ತು ರಶೀದಿ ಸಂ. 4535 ರಲ್ಲಿ ರೂ. 36,000/– ಗಳನ್ನು ಒಟ್ಟು ರೂ. 1,09,117/– ಗಳನ್ನು ತಾನು ವಸೂಲಿ ಮಾಡಿ ದೇವಾಲಯದ ನಿಧಿಗೆ ಜಮಾ ಮಾಡಿರುತ್ತೇನೆಂದು, ಆದುದರಿಂದ ತನ್ನ ಅವಧಿಯಲ್ಲಿ ಯಾವುದೇ ಹಣ ದುರುಪಯೋಗವಾಗಿಲ್ಲವೆಂದು ತಿಳಿಸಿರುತ್ತಾರೆ.

ಅಲ್ಲದೆ ತಾನು ಪ್ರಭಾರ ವಹಿಸಿಕೊಂಡ ನಂತರ ಹಣ ದುರುಪಯೋಗದ ಬಗ್ಗೆ ಪರಿಶೀಲಿಸಿ, ಸೇವಾ ಕೌಂಟರ್‌ನಲ್ಲಿ ಕೆಲಸ ನಿರ್ವಹಿಸುತ್ತಿದ್ದ ಶ್ರೀ ಅಶೋಕ್ ಕುಮಾರ್‌ರವರನ್ನು ಅಮಾನತ್ತುಗೊಳಿಸಿ ವಿಶೇಷ ಲೆಕ್ಕ ಪರಿಶೋಧನೆ ಮಾಡಿಸಿ ವರದಿಯೊಂದಿಗೆ ಸ್ಥಳೀಯ ಪೊಲೀಸ್ ಸ್ಟೇಷನ್‌ನಲ್ಲಿ ಕೇಸ್ ದಾಖಲಿಸಿ ಪ್ರಕರಣವು ನ್ಯಾಯಾಲಯದಲ್ಲಿ ಬಾಕಿ ಇರುವುದಾಗಿ ತಿಳಿಸಿ, ಹಣ ದುರುಪಯೋಗವು ತಾನು ಪ್ರಭಾರ ವಹಿಸಿಕೊಳ್ಳುವುದಕ್ಕೆ ಮುಂಚಿತವಾಗಿ ನಡೆದಿರುವುದರಿಂದ ತನ್ನನ್ನು ಆರೋಪದಿಂದ ಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ.

ಶ್ರೀ ಎಂ. ವಿಜಯಚಂದ್ರ ಇವರು ಮೇಲೆ (3) ರಲ್ಲಿ ಓದಲಾದ ದಿನಾಂಕ: 15.05.2000ರ ತಮ್ಮ ಲಿಖಿತ ಹೇಳಿಕೆಯಲ್ಲಿ ತಾನು ಯಾವುದೇ ತಪ್ಪನ್ನು ಮಾಡಿಲ್ಲವೆಂದೂ, ಆದಾಗ್ಯೂ ತನ್ನ ಅವಧಿಯಲ್ಲಿ ದುರುಪಯೋಗವಾಗಿರುವ ರೂ. 5,201/– ಗಳನ್ನು ಕಟ್ಟಲು ಸಿದ್ಧನಿದ್ದೇನೆಂದು, ತನ್ನ ವಿರುದ್ಧದ ಶಿಸ್ತು ಕ್ರಮವನ್ನು ಕೈಬಿಡುವಂತೆ ಕೋರಿರುತ್ತಾರೆ.

ಮೇಲ್ಕಂಡ ಅಧಿಕಾರಿಗಳು ತಮ್ಮ ಲಿಖಿತ ಹೇಳಿಕೆಯಲ್ಲಿ ನೀಡಿರುವ ವರದಿಯ ಹಿನ್ನೆಲೆಯಲ್ಲಿ ಮತ್ತು ಆರೋಪಗಳ ಸತ್ಯಾಸತ್ಯತೆಯನ್ನು ಅರಿಯುವ ಸಲುವಾಗಿ ಇದನ್ನು ಕೂಲಂಕುಷವಾಗಿ ವಿಚಾರಣೆ ಮಾಡಲು ಸರ್ಕಾರವು ತೀರ್ಮಾನಿಸಿ ಮೇಲೆ (4) ರಲ್ಲಿ ಓದಲಾದ ದಿನಾಂಕ: 19.03.2001ರ ಆದೇಶದಲ್ಲಿ ಶ್ರೀ ಎಂ.ಜೆ. ಇಂದ್ರಕುಮಾರ್, ನಿವೃತ್ತ ಸೆಷನ್ಸ್ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣಾಧಿಕಾರಿಯವರು ವಿವರವಾದ ಇಲಾಖಾ ವಿಚಾರಣೆ ನಡೆಸಿ ಮೇಲೆ (5) ರಂತೆ ದಿನಾಂಕ: 31.05.2002 ರಂದು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ವಿಚಾರಣಾಧಿಕಾರಿಗಳು ತಮ್ಮ ವರದಿಯಲ್ಲಿ ಆರೋಪಿತ ಅಧಿಕಾರಿಯಾದ ಶ್ರೀ ಎಂ.ಎಸ್. ವೆಂಕಟೇಶ್‌ಮೂರ್ತಿಯವರ ಮೇಲೆ ಮಾಡಿರುವ ಆಪಾದನೆಯನ್ನು ಸಾಬೀತುಪಡಿಸುವಲ್ಲಿ ಯಾವ ಸಾಕ್ಷ್ಯಾಧಾರಗಳನ್ನು ಒದಗಿಸದೇ ಇರುವುದರಿಂದ ಇವರ ಮೇಲೆ ಮಾಡಿರುವ ಆಪಾದನೆಯನ್ನು ಸಾಬೀತುಪಡಿಸುವಲ್ಲಿ ಶಿಸ್ತು ಪ್ರಾಧಿಕಾರವು ವಿಫಲಗೊಂಡಿರುವುದರಿಂದ ಅವರ ಮೇಲಿನ ಆರೋಪವು ಸಾಬೀತಾಗಿಲ್ಲವೆಂದು ಮತ್ತು ಶ್ರೀ ಎಂ. ವಿಜಯಚಂದ್ರ ಇವರು ತನ್ನ ಮೇಲೆ ಮಾಡಿರತಕ್ಕ ಆಪಾದನೆಯನ್ನು ತಾವೇ ಒಪ್ಪಿಕೊಂಡಿರುವುದರಿಂದ ಸದರಿಯವರ ವಿರುದ್ಧದ ಆರೋಪವು ಸಾಬೀತಾಗಿರುತ್ತದೆಯೆಂದು ವಿಚಾರಧಿಕಾರಿಯವರು ಅಭಿಪ್ರಾಯಪಟ್ಟಿರುತ್ತಾರೆ.

ವಿಚಾರಣಾಧಿಕಾರಿಗಳ ವಿಚಾರಣಾ ವರದಿ, ಆಪಾದಿತರ ಲಿಖಿತ ಹೇಳಿಕೆ ಮತ್ತು ಸಾಕ್ಷ್ಯಾಧಾರಗಳನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ, ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪಿಕೊಂಡು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 120 ಎಂಇಟಿ 95, ಬೆಂಗಳೂರು, ದಿನಾಂಕ: 29ನೇ ಜುಲೈ 2009**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರವು, ಶ್ರೀ ಎಂ.ಎಸ್. ವೆಂಕಟೇಶ್‌ಮೂರ್ತಿ, ನಿವೃತ್ತ ಗ್ರೂಪ್–ಎ ಅಧಿಕಾರಿ ಇವರ ವಿರುದ್ಧದ ಆರೋಪಗಳು ವಿಚಾರಣಾ ವರದಿಯಲ್ಲಿ ಸಾಬೀತಾಗಿಲ್ಲದಿರುವುದರಿಂದ ಸರ್ಕಾರವು ಇವರನ್ನು ದೋಷಮುಕ್ತರನ್ನಾಗಿಸಿ ಆದೇಶಿಸಿದೆ.

ಪ್ರಕರಣದ ಇನ್ನೊಬ್ಬ ಆರೋಪಿಯಾದ ಶ್ರೀ ಎಂ. ವಿಜಯಚಂದ್ರ, ನಿವೃತ್ತ ಗ್ರೂಪ್–ಬಿ ಅಧಿಕಾರಿ ಇವರಿಗೆ ಸಂಬಂಧಿಸಿದಂತೆ ಪ್ರತ್ಯೇಕವಾಗಿ ಆದೇಶ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1880

**ಜಿ. ರಾಮಚಂದ್ರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಮುಜರಾಯಿ)

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ವಿ.ವಿ. ಬ್ಯಾಲಿಹಾಳ್, ನಿವೃತ್ತ ಅಭಿಯೋಗ ಉಪ ನಿರ್ದೇಶಕರು, ಬೆಂಗಳೂರು ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247 (ಎ) (1) ರ ಸೌಲಭ್ಯಕ್ಕೆ ಪರಿಗಣಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರದ ಅಧಿಸೂಚನೆ–। ಸಂಖ್ಯೆ. ಲಾ 67 ಪಿಪಿಇ 82, ದಿ: 22.12.82

2) ಸರ್ಕಾರದ ಆದೇಶದ ಸಂ, ಲಾ 69 ಪಿಪಿಇ 86, ದಿನಾಂಕ: 21/23.10.1986

3) ಸದರಿ ಅಧಿಕಾರಿಯವರ ಮನವಿ ದಿನಾಂಕ: 14.04.2009

4) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಇವರ ಪತ್ರ ಸಂ. ಡಿಪಿಎನ್/ಲೆಕ್ಕ–1/313/08–09 ದಿನಾಂಕ: 22.04.2008

**ಪ್ರಸ್ತಾವನೆ:**

ಶ್ರೀ ವಿ.ವಿ. ಬ್ಯಾಲಿಹಾಳ್, ನಿವೃತ್ತ ಅಭಿಯೋಗ ಉಪ ನಿರ್ದೇಶಕರು, ಬೆಂಗಳೂರು, ಇವರು ಮೇಲೆ (1) ರಲ್ಲಿ ಓದಲಾದ ದಿನಾಂಕ :22.12.82ರ ಸರ್ಕಾರದ ಅಧಿಸೂಚನೆಯ ಕ್ರ. ಸಂ. 11ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ:01.01.1983 ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಮೇಲೆ (2) ರಲ್ಲಿ ಓದಲಾದ ದಿನಾಂಕ:21/23.10.1986ರ ಸರ್ಕಾರದ ಆದೇಶದನ್ವಯ ಸದರಿ ನಿವೃತ್ತ ಅಧಿಕಾರಿಯ ಜನ್ಮ ದಿನಾಂಕವನ್ನು 12.05.1949 ಎಂದು ಒಪ್ಪಲಾಗಿದೆ.

ಮೇಲೆ (3) ರಲ್ಲಿ ಓದಲಾದ ಮನವಿಯಲ್ಲಿ, ಸದರಿ ನಿವೃತ್ತ ಅಧಿಕಾರಿಯವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247 (ಎ) (1)ರ ರನ್ವಯ ಹೆಚ್ಚುವರಿ ಸೇವೆಗೆ ಅರ್ಹರಿದ್ದು, ಸದರಿಯವರ ಅರ್ಹತಾದಾಯಕ ಸೇವೆಗೆ ಹೆಚ್ಚುವರಿ ಸೇವೆಯನ್ನು ಸೇರ್ಪಡೆ ಮಾಡುವಂತೆ ಕೋರಿರುತ್ತಾರೆ.

ಮೇಲೆ (4) ರಲ್ಲಿ ಓದಲಾದ ದಿನಾಂಕ: 22.04.2009ರ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು, ಇವರು ಶ್ರೀ ವಿ.ವಿ. ಬ್ಯಾಲಿಹಾಳ್, ನಿವೃತ್ತ ಅಭಿಯೋಗ ಉಪ ನಿರ್ದೇಶಕರು, ಬೆಂಗಳೂರು, ಇವರು ದಿನಾಂಕ: 01.01.1983 ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಹಾಜರಾಗಿರುತ್ತಾರೆ. ಇವರ ಜನ್ಮ ದಿನಾಂಕ:12.05.1949 ಆಗಿರುತ್ತದೆ. ಸದರಿ ಅಧಿಕಾರಿಯು 33 ವರ್ಷ, 07 ತಿಂಗಳು, 19 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುವುದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247 (ಎ) (1) ರ ಪ್ರಕಾರ ನಿವೃತ್ತಿ ವೇತನಕ್ಕೆ ಮಾತ್ರ ಮೂರು ವರ್ಷಗಳ ಸೇವೆಯನ್ನು ಹೆಚ್ಚುವರಿಯಾಗಿ ಸದರಿ ಅಧಿಕಾರಿಯ ಆರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಸರ್ಕಾರವು ಆದೇಶವನ್ನು ಹೊರಡಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಆದುದರಿಂದ ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ; ಒಇ 501 ಪಿಪಿಇ 2008, ಬೆಂಗಳೂರು, ದಿನಾಂಕ: 30ನೇ ಜುಲೈ 2009**

ಶ್ರೀ ವಿ.ವಿ. ಬ್ಯಾಲಿಹಾಳ್, ನಿವೃತ್ತ ಅಭಿಯೋಗ ಉಪ ನಿರ್ದೇಶಕರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ, 247 (ಎ) (1) ರನ್ವಯ ಮೂರು ವರ್ಷಗಳ ಅಧಿಕ ಸೇವೆಯನ್ನು ಶ್ರೀಯುತರ ನಿವೃತ್ತಿ ವೇತನಕ್ಕೆ ಮಾತ್ರ ಹೆಚ್ಚುವರಿ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ. ಆಈ 528 ವೆಚ್ಚ–11/2009, ದಿನಾಂಕ: 01.07.2009ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ**

ಪಿ.ಆರ್. 1884

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ
(ಕಾ ಮತ್ತು ಸು ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀಮತಿ ಎಂ. ಸಾವಿತ್ರಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು (ಸ್ವತಂತ್ರ ಪ್ರಭಾರ) ಸಿ.ಜೆ.ಎಂ. ನ್ಯಾಯಾಲಯ, ಶಿವಮೊಗ್ಗ, ಇವರನ್ನು ಸೇವೆಯಿಂದ ಅಮಾನತ್ತಿನಲ್ಲಿಡುವ ಬಗ್ಗೆ.

**ಓದಲಾಗಿದೆ:** 1) ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಡಿಪಿಎನ್. ಸಿಶಾ 1:99:2009–10 ದಿನಾಂಕ : 10.07.2009.

2) ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂ. ಲೋಕ್/ಐಎನ್‌ವಿ(ಜಿ)/ಎಲ್–23/ಸಿಆರ್–7/2009/ಶಿವಮೊಗ್ಗ, ದಿನಾಂಕ: 09.07.2009.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ದಿನಾಂಕ: 10.07.2009ರ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರವರ ಪತ್ರ ಮತ್ತು ಮೇಲೆ (2) ರಲ್ಲಿ ದಿನಾಂಕ: 09.07.2009ರ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರಗಳಲ್ಲಿ ಶಿವಮೊಗ್ಗ ಲೋಕಾಯುಕ್ತ ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ:7/2009ರ ಪ್ರಕರಣದಲ್ಲಿ ಆರೋಪಿಯಾಗಿರುವ ಶ್ರೀಮತಿ ಎಂ. ಸಾವಿತ್ರಿ, ಹಿರಿಯ ಸಹಾಯಕ, ಸರ್ಕಾರಿ ಅಭಿಯೋಜಕರು (ಸ್ವತಂತ್ರ ಪ್ರಭಾರ), ಚೀಫ್ ಜ್ಯುಡಿಷಿಯಲ್ ಮ್ಯಾಜಿಸ್ಟ್ರೇಟ್ ನ್ಯಾಯಾಲಯ, ಶಿವಮೊಗ್ಗ, ಇವರನ್ನು ದಿನಾಂಕ:04.07.2009 ರಂದು ಮಧ್ಯಾಹ್ನ 4.30 ಗಂಟೆ ಸುಮಾರಿಗೆ ಶಿವಮೊಗ್ಗ ಗ್ರಾಮಾಂತರ ಪೊಲೀಸ್ ಠಾಣೆಯ ಮೊಕದ್ದಮೆ ಸಂಖ್ಯೆ: 244/2009ರಲ್ಲಿ ಶ್ರೀ ಎಂ. ಲೋಕೇಶ್ ಈಸೂರು, ನ್ಯಾಯವಾದಿಗಳು, ಶಿವಮೊಗ್ಗ, ಇವರಿಂದ ಆರೋಪಿಯ ಜಾಮೀನು ಅರ್ಜಿಗೆ ತಕರಾರು ಸಲ್ಲಿಸಲು ರೂ. 500.00 ಲಂಚ ಪಡೆಯುವಾಗ ಶಿವಮೊಗ್ಗ ಲೋಕಾಯುಕ್ತ ಪೊಲೀಸರ ಬಲೆಗೆ ಸಿಕ್ಕಿರುವುದಾಗಿ ತಿಳಿಸಿರುತ್ತಾರೆ. ಸದರಿ ಆರೋಪಿತ ಸರ್ಕಾರಿ ಅಧಿಕಾರಿಯವರ ಮೇಲೆ ಸದರಿ ಲೋಕಾಯುಕ್ತ ಪೊಲೀಸರು ಗುನ್ನೆ ನಂ. 7/2009, ಕಲಂ 7, 13 (1) (ಡಿ) ಸಹವಾಚಕ 13 (2) ಲಂಚ ಪ್ರತಿಬಂಧಕ ಕಾಯಿದೆ 1988ರ ಅಡಿಯಲ್ಲಿ ಪ್ರಕರಣವನ್ನು ದಾಖಲಿಸಿಕೊಂಡು, ಸದರಿ ಅಧಿಕಾರಿಯನ್ನು ದಸ್ತಗಿರಿ ಮಾಡಿ ತನಿಖೆ ನಡೆಸುತ್ತಿರುವುದಾಗಿ ತಿಳಿಸಿರುತ್ತಾರೆ. ಆದ ಕಾರಣ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ, ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 10(1) (ಎ) ರ ರೀತ್ಯಾ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ, ದಿನಾಂಕ:04.07.2009 ರಿಂದ ಜಾರಿಗೆ ಬರುವಂತೆ ನಿಲಂಬನೆಯಲ್ಲಿಟ್ಟು ಆದೇಶ ಹೊರಡಿಸುವಂತೆ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರು ಕೋರಿರುತ್ತಾರೆ.

ವಿಷಯವನ್ನು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ. ಒಇ 339 ಪಿಪಿಇ 2009, ಬೆಂಗಳೂರು, ದಿನಾಂಕ: 1ನೇ ಆಗಸ್ಟ್ 2009**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಕ್ಕಾಗಿ ಶ್ರೀಮತಿ ಎಂ. ಸಾವಿತ್ರಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು (ಸ್ವತಂತ್ರ ಪ್ರಭಾರ), ಚೀಫ್ ಜ್ಯುಡಿಷಿಯಲ್ ಮ್ಯಾಜಿಸ್ಟ್ರೇಟ್ ನ್ಯಾಯಾಲಯ, ಶಿವಮೊಗ್ಗ, ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 10 (1) (ಎ)ರ ಅನುಸಾರ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ ದಿನಾಂಕ:04.07.2009 ರಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಅಮಾನತ್ತಿನಲ್ಲಿರಿಸಿದೆ.

ಸದರಿ ಅಧಿಕಾರಿಯವರು ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿ 1957ರ ನಿಯಮ 98ರ ಅನುಸಾರ ಅಮಾನತ್ತಿನ ಅವಧಿಯಲ್ಲಿ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯು ನೇಮಕಾತಿ ಪ್ರಾಧಿಕಾರ/ಮೇಲಾಧಿಕಾರಿಯ ಪೂರ್ವಾನುಮತಿಯನ್ನು ಪಡೆಯದೇ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ**

ಪಿ.ಆರ್. 1885

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ
(ಕಾ ಮತ್ತು ಸು ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ: ನಿಶ್ಚಯ್ ಆರ್. ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಹಾರನಹಳ್ಳಿ, ಅರಸೀಕೆರೆ ತಾಲ್ಲೂಕು, ಹಾಸನ ಜಿಲ್ಲೆ, ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು, ಇವರ ಪತ್ರ ಸಂಖ್ಯೆ ಜೆಆರ್‌ಒ (2) 322/2008–09 ದಿನಾಂಕ: 07/05/2009.

**ಪ್ರಸ್ತಾವನೆ:**

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರು ಮೇಲೆ ಓದಲಾದ ಪತ್ರದಲ್ಲಿ ಡಾ: ನಿಶ್ಚಯ್ ಆರ್., ಇವರು ಕರ್ನಾಟಕ ಲೋಕ ಸೇವಾ ಆಯೋಗದ ಮೂಲಕ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ಆಯ್ಕೆಗೊಂಡು ಸರ್ಕಾರದ ಅಧಿಸೂಚನೆ ಸಂಖ್ಯೆ ಆಕುಕ 739 ಹೆಚ್‌ಎಸ್‌ಹೆಚ್ 2008, ದಿನಾಂಕ: 09.01.2009 ರನ್ವಯ ಪ್ರಾಥಮಿಕ ಆರೋಗ್ಯ ಕೇಂದ್ರ, ಹಾರನಹಳ್ಳಿ, ಅರಸೀಕೆರೆ ತಾಲ್ಲೂಕು, ಹಾಸನ ಜಿಲ್ಲೆ, ಇಲ್ಲಿ ದಿನಾಂಕ: 29.01.2009 ರಿಂದ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ನಂತರ ಉನ್ನತ ವ್ಯಾಸಂಗದ ನಿಮಿತ್ತ ಹುದ್ದೆಗೆ ರಾಜೀನಾಮೆ ಸಲ್ಲಿಸಿ, ದಿನಾಂಕ: 31.01.2009 ರಿಂದ ಕರ್ತವ್ಯಕ್ಕೆ ಹಾಜರಾಗದಿರುವುದರಿಂದ ದಿನಾಂಕ:31.01.2009 ರಿಂದಲೇ ಸದರಿ ವೈದ್ಯರ ರಾಜೀನಾಮೆಯನ್ನು ಅಂಗೀಕರಿಸಲು ಕೋರಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂ. ಆಕುಕ 169 ಹೆಚ್‌ಎಸ್‌ಹೆಚ್ 2009, ಬೆಂಗಳೂರು, ದಿನಾಂಕ: 3ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಡಾ: ನಿಶ್ಚಯ್ ಆರ್., ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಹಾರನಹಳ್ಳಿ, ಅರಸೀಕೆರೆ ತಾಲ್ಲೂಕು, ಹಾಸನ ಜಿಲ್ಲೆ, ಇವರು ತಮ್ಮ ಹುದ್ದೆಗೆ ಸಲ್ಲಿಸಿರುವ ರಾಜೀನಾಮೆಯನ್ನು ದಿನಾಂಕ: 31.01.2009 ರಿಂದ ಅನ್ವಯವಾಗುವಂತೆ ಸರ್ಕಾರವು ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ. ಹೇಮನಾಥ್**

ಪಿ.ಆರ್. 1891

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು–1)

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಲಾ 144 ಎಲ್‌ಎಸಿ 2009, ಬೆಂಗಳೂರು, ದಿನಾಂಕ: 6ನೇ ಆಗಸ್ಟ್ 2009**

ಕರ್ನಾಟಕ ಅಧೀನ ನ್ಯಾಯಾಲಯಗಳಿಗೆ ಸಮಾನ ರೀತಿಯ ಸಿಬ್ಬಂದಿ ಒದಗಿಸುವ ಕುರಿತಂತೆ ಸಂಖ್ಯೆ: ಲಾ 137 ಎಲ್‌ಎಸಿ 2005, ದಿನಾಂಕ: 25.03.2008ರ ಸರ್ಕಾರಿ ಆದೇಶದಲ್ಲಿ ಸೃಜಿಸಿ ತುಂಬಲು ನೀಡಲಾಗಿರುವ ಷರತ್ತುಗಳಿಗೆ ಒಳಪಟ್ಟು ಮೊದಲನೆಯ ಹಂತವಾಗಿ ವಿವಿಧ ವೃಂದದ 800 (ಎಂಟು ನೂರು) ಹುದ್ದೆಗಳನ್ನು ಇದಕ್ಕೆ ಲಗತ್ತಿಸಿರುವ ಅನುಬಂಧದ ಪಟ್ಟಿಯಲ್ಲಿ ನಮೂದಿಸಿರುವಂತೆ ರಾಜ್ಯದ ಜಿಲ್ಲಾ ಘಟಕಗಳಿಗೆ ಹಂಚಿಕೆ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಇ. ಶಿವಾನಂದ**

ಸರ್ಕಾರದ ಅಧೀನ ಕಾರ್ಯದರ್ಶಿ, (ಆಡಳಿತ–1)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ಸರ್ಕಾರದ ಅಧಿಸೂಚನೆ ಸಂಖ್ಯೆ : ಲಾ 144 ಎಲ್‌ಎಸಿ 2009, ದಿನಾಂಕ: 06.08.2009ರ ಅನುಬಂಧ**

| Sl. No. | District/Unit | Sheristedars | Judgement Writer | Stenographer | F.D.A. | S.D.A. | Total |
|---|---|---|---|---|---|---|---|
| 01 | Bangalore City | 14 | 08 | 07 | 20 | 29 | 78 |
| 02 | S.C.C. Bangalore | 03 | 01 | 03 | 10 | 10 | 27 |
| 03 | Bangalore Rural | 03 | 01 | 02 | 07 | 10 | 23 |
| 04 | Bagalkot | 03 | 01 | 02 | 08 | 12 | 26 |
| 05 | Belgaum | 06 | 01 | 04 | 14 | 23 | 48 |
| 06 | Bellary | 03 | 01 | 01 | 05 | 10 | 20 |
| 07 | Bidar | 03 | 01 | 01 | 06 | 09 | 20 |
| 08 | Bijapur | 04 | 01 | 03 | 08 | 13 | 29 |
| 09 | Chikkaballapur | 02 | 01 | 01 | 02 | 02 | 08 |
| 10 | Chikkamagalur | 03 | 01 | 02 | 08 | 11 | 25 |
| 11 | C.R.Nagar | 02 | 01 | 01 | 04 | 06 | 14 |
| 12 | Chitradurga | 03 | 01 | 02 | 07 | 09 | 22 |
| 13 | Davanagere | 03 | 01 | 02 | 06 | 10 | 22 |
| 14 | Dharwad | 04 | 01 | 03 | 09 | 13 | 30 |
| 15 | D.K. Mangalore | 04 | 01 | 03 | 08 | 15 | 31 |
| 16 | Gadag | 03 | 01 | 01 | 04 | 09 | 18 |
| 17 | Gulbarga | 05 | 01 | 04 | 11 | 14 | 35 |
| 18 | Hassan | 04 | 01 | 03 | 09 | 14 | 31 |

| Sl. No. | District/Unit | Sheristedars | Judgement Writer | Stenographer | F.D.A. | S.D.A. | Total |
|---|---|---|---|---|---|---|---|
| 19 | Haveri | 03 | 01 | 01 | 07 | 10 | 22 |
| 20 | Kodagu Madikeri | 02 | 01 | 01 | 05 | 07 | 16 |
| 21 | Kolar | 02 | 01 | 01 | 05 | 08 | 17 |
| 22 | Koppal | 02 | 01 | 01 | 04 | 06 | 14 |
| 23 | Mandya | 04 | 01 | 03 | 08 | 13 | 29 |
| 24 | Mysore | 05 | 01 | 04 | 12 | 19 | 41 |
| 25 | Raichur | 03 | 01 | 02 | 05 | 06 | 19 |
| 26 | Ramanagara | 03 | 01 | 01 | 04 | 06 | 15 |
| 27 | Shimoga | 04 | 01 | 03 | 08 | 14 | 30 |
| 28 | Tumkur | 04 | 01 | 03 | 12 | 16 | 36 |
| 29 | Udupi | 03 | 01 | 02 | 05 | 09 | 20 |
| 30 | U.K. Karwar | 05 | 01 | 03 | 10 | 15 | 34 |
| | **TOTAL** | **112** | **37** | **70** | **231** | **350** | **800** |

**ಇ. ಶಿವಾನಂದ**
ಸರ್ಕಾರದ ಅಧೀನ ಕಾರ್ಯದರ್ಶಿ (ಅಡಳಿತ–1),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

ಪಿ.ಆರ್. 1895

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ವಿವಿಧ ವರ್ಗಗಳ ಮಾರಾಟಗಾರರ ನಮೂದಿತ ಪಟ್ಟಿಯ ಕುರಿತು.

**ಓದಲಾಗಿದೆ:** 1. ದಿನಾಂಕ: 9.1.2007ರ ಸರ್ಕಾರದ ಆದೇಶ ಸಿಆಸುಇ 74 ವಿಮಆ 2005.
2. ದಿನಾಂಕ: 5.1.2009ರ ಸರ್ಕಾರದ ಆದೇಶ ಸಿಆಸುಇ 74 ವಿಮಆ 2005.
3. ದಿನಾಂಕ: 31.03.2009ರ ಸರ್ಕಾರದ ಆದೇಶ ಸಿಆಸುಇ 74 ವಿಮಆ 2005.

**ಪ್ರಸ್ತಾವನೆ:**

ರಾಜ್ಯದಲ್ಲಿರುವ ವಿವಿಧ ಸರ್ಕಾರಿ ಕಛೇರಿಗಳಲ್ಲಿ ಗಣಕೀಕರಣಕ್ಕಾಗಿ ಅವಶ್ಯವಿರುವ ಗಣಕ ಯಂತ್ರಗಳು, ಪ್ರಿಂಟರ್‌ಗಳು, ಅವುಗಳ ಪೂರಕ ಸಾಧನಗಳು, ವಿವಿಧ ತಂತ್ರಾಂಶಗಳು, ತಂತ್ರಾಂಶ ಸಿದ್ಧಪಡಿಸುವ, ನೆಟ್ ವರ್ಕಿಂಗ್, ಯು.ಪಿ.ಎಸ್. ತರಬೇತಿ, ವೆಬ್ ಡಿಸೈನಿಂಗ್, ಡೇಟಾ ಎಂಟ್ರಿ, ಹಾಗೂ ವಾರ್ಷಿಕ ನಿರ್ವಹಣೆ ಮುಂತಾದ ಸಾಮಗ್ರಿ/ಸೇವೆಗಳನ್ನು ಪೂರೈಸುವುದಕ್ಕಾಗಿ ನಾನಾ ಸಂಸ್ಥೆಗಳನ್ನು ಸಂಕ್ಷಿಪ್ತಗೊಳಿಸಿ, ಮಾರಾಟಗಾರರ ಪಟ್ಟಿಗೆ ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದ ಮೂಲಕ ಅನುಮೋದನೆ ನೀಡಲಾಗಿತ್ತು. ಸದರಿ ಪಟ್ಟಿಯಲ್ಲಿರುವ ಸಂಸ್ಥೆಗಳ ಸಿಂಧುತ್ವವು 31.12.2008ಗೆ ಕೊನೆಗೊಂಡಿರುತ್ತದೆ. 2009–10ನೇ ಸಾಲಿಗೆ ಹೊಸ ಪಟ್ಟಿ ಸಿದ್ಧಪಡಿಸುವ ಪ್ರಕ್ರಿಯೆ ಇನ್ನೂ ಅಂತಿಮವಾಗಿಲ್ಲವಾದ್ದರಿಂದ, ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದನ್ವಯ ಚಾಲ್ತಿಯಲ್ಲಿದ್ದ ಮಾರಾಟಗಾರರ ಪಟ್ಟಿಯ ಸಿಂಧುತ್ವವನ್ನು 31.03.2009ರ ರವರಿಗೆ ಮೇಲೆ (2) ರಲ್ಲಿ ಓದಲಾದ ಸರ್ಕಾರದ ಆದೇಶದ ಮೂಲಕ ಮತ್ತು 31.07.2009ರವರಿಗೆ ಮೇಲೆ (3) ರಲ್ಲಿ ಓದಲಾದ ಸರ್ಕಾರದ ಆದೇಶದ ಮೂಲಕ ವಿಸ್ತರಿಸಲಾಗಿತ್ತು.

2. ಹೊಸ ಪಟ್ಟಿ ಸಿದ್ಧಪಡಿಸುವ ಪ್ರಕ್ರಿಯೆ ಪ್ರಾರಂಭವಾಗಿದ್ದು, ಇನ್ನೂ ಅಂತಿಮವಾಗಿಲ್ಲವಾದ್ದರಿಂದ ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದನ್ವಯ ಚಾಲ್ತಿಯಲ್ಲಿದ್ದ ಮಾರಾಟಗಾರರ ಪಟ್ಟಿಯ ಸಿಂಧುತ್ವವನ್ನು 30.09.2009ರವರೆಗೆ ಅಥವಾ ಹೊಸ ಪಟ್ಟಿ ಸಿದ್ಧಗೊಳ್ಳುವವರೆಗೆ ಯಾವುದೂ ಮೊದಲೋ ಅಲ್ಲಿಯವರೆಗೆ ಮತ್ತೊಮ್ಮೆ ವಿಸ್ತರಿಸುವುದು ಅವಶ್ಯವಾಗಿದೆ. ಅದರಂತೆ ಕೆಳಕಾಣಿಸಿದ ಸರ್ಕಾರದ ಆದೇಶವನ್ನು ಪ್ರಸ್ತಾಪಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 30 ಇಮಆ 2008, ಬೆಂಗಳೂರು, ದಿನಾಂಕ: 1ನೇ ಆಗಸ್ಟ್, 2009**

3. ರಾಜ್ಯದಲ್ಲಿರುವ ವಿವಿಧ ಸರ್ಕಾರಿ ಕಛೇರಿಗಳಲ್ಲಿ ಗಣಕೀಕರಣಕ್ಕಾಗಿ ಅವಶ್ಯವಿರುವ ಗಣಕ ಯಂತ್ರಗಳು, ಪ್ರಿಂಟರ್‌ಗಳು, ಅವುಗಳ ಪೂರಕ ಸಾಧನಗಳು, ವಿವಿಧ ತಂತ್ರಾಂಶಗಳು, ತಂತ್ರಾಂಶ ಸಿದ್ಧಪಡಿಸುವ, ನೆಟ್ ವರ್ಕಿಂಗ್, ಯು.ಪಿ.ಎಸ್/ ತರಬೇತಿ ವೆಬ್ ಡಿಸೈನಿಂಗ್, ಡೇಟಾ ಎಂಟ್ರಿ ಹಾಗೂ ವಾರ್ಷಿಕ ನಿರ್ವಹಣೆ ಮುಂತಾದ ಸಾಮಗ್ರಿ/ಸೇವೆಗಳನ್ನು

ಪೂರೈಸುವುದಕ್ಕಾಗಿ ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿನ ಸಂಸ್ಥೆಗಳ ಸಿಂಧುತ್ವವನ್ನು ದಿನಾಂಕ:30.09.2009ರ ವರೆಗೆ ಅಥವಾ ಹೊಸ ಪಟ್ಟಿ ಸಿದ್ಧಗೊಳ್ಳುವವರೆಗೆ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಚಂದ್ರಶೇಖರ**
ಪೀಠಾಧಿಕಾರಿ–1, ಇ–ಆಡಳಿತ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಸು)

ಪಿ.ಆರ್. 1901

**INFRASTRUCTURE DEVELOPMENT SECRETRIAT**

**Sub:** Release of funds towards cost sharing Railway Project– Kotturu- Harihar new broad gauge railway line project.

**Read:**
1. GO No. IDD I NSW 2002 dated 22.03.02
2. GO No. IDD 47 NSW 2003 (P) dated 26.03.04
3. GO No. IDD 51 NSW 2004 dated 19.07.2004
4. GO No. IDD 98 NSW 2003 dated 21.10.2006
5. GO No. IDD 98 NSW 2003 dated 20.12.2006
6. GO No. IDD 98 NSW 2003 dated 5.09.2007
7. GO No. IDD 15 NSW 2008 dated 22.10.2008
8. GO No. IDD 15 NSW 2008 dated 17.12.2008
9. GO No. IDD 15 NSW 2008 dated 20.01.2009
10. GO No. IDD 15 NSW 2008 dated 18.02.2009
11. GO No IDD 15 NSW 2008 dated 21.07.2009
12. GO No. Letter No.W.359/CN/BN/IDcCK dated 14.07.2009 of C.A.O. SWR. Bangalore.

**Premable:**

In the Government Orders referred to at Sl. No. (1) to (11) above Government of Karnataka has so far released an amount of Rs. 130.26 crore towards cost sharing for Kotturu-Harihar New Railway Line Project.

2. The Chief Administrative Officer, South Western Railway, Bangalore in his letter read at Sl No.(12) above has stated that the railways had already spent Rs. 104.06 crores towards Kotturu-Harihar new raily line project and requested for immediate deposit of balance of Rs. 81.39 crores i.e. 2/3 share of Government of Kanrataka. However, in Government Orders read above an amount of Rs. 130.26 crores has so far been released by the State Government. As such the balance to be released by the State Government will be Rs. 71.13 crore instead of Rs. 81.39 crores requested by South Western Railway.

3. The proposal of Railway has been examined and it has been decided to release an amount of Rs. 24.31 crore out of the Budget of Rs. 100.00 crores provided under the Head of Account “5465-01-190-3-05” (Plan) 211 investment towards cost sharing for new railway projects during 2009-10. Hence this order.

**Government Order No. IDD 15 NSW 2008, Bangalore, Dated: 4th August 2009**

After careful examination of the request of Railways, Government is pleased to release Rs. 24.31 crores (Rupees Twenty Four Crores Thirty One Lakhs only) towards Kotturu-Harihar new railway line being the part of the balance 2/3rd share of Government of Karnataka. The above amount shall be met under the Head of Account “5465-01-190-3-05” (Plan) 211 Investment out of the budget provisions of Rs. 100.00 crores towards cost sharing for new railway projects during 2009-10.

2. The Chief Executive Officer K.R.IDE is authorized to draw the amount on a payees' receipt duly countersigned by the Under Secretary to Government, Infrastucture Development Department and K-RIDE, shall in turn deposit the same with the Financial Advisor and Chief Accounts Officer (Construction), South Western Railway, Bangalore, under intimation to the Government.

3. This order is issued in accordance with the concurrence of Finance Department given vide U.O. Note No.FD 1265 Exp-1/09 dated 31.07.2009.

By order and in the name of Govenor of Karnataka,

**N. MANJULA GEETHA**

P.R. 1905

Under Secretary to Government,
Infrastructure Development Department

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ:** ಹುಬ್ಬಳ್ಳಿಯಲ್ಲಿ ಆರ್ಯಭಟ ಮಾಹಿತಿ ತಂತ್ರಜ್ಞಾನ ಉದ್ಯಾನದ ಅಭಿವೃದ್ಧಿಗಾಗಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ ಐಟಿಡಿ 25 ಎಂಡಿಎ 2008, ದಿನಾಂಕ: 6.9.2008.

2. ಆಯುಕ್ತರು, ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆರವರ ಪತ್ರ ಸಂಖ್ಯೆ: ಹೆಚ್‌ಡಿಎಂಸಿ: 100:02: 469:09, ದಿನಾಂಕ: 14.07.2009

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ 6.9.2008ರ ಸರ್ಕಾರಿ ಆದೇಶದಲ್ಲಿ ಆಯುಕ್ತರು, ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆರವರಿಗೆ ಹುಬ್ಬಳ್ಳಿಯಲ್ಲಿ ಆರ್ಯಭಟ ಮಾಹಿತಿ ತಂತ್ರಜ್ಞಾನ ಉದ್ಯಾನದ ಅಭಿವೃದ್ಧಿ ಯೋಜನೆಗೆ ರೂ. 1.00 ಕೋಟಿ ಅನುದಾನವನ್ನು ಪ್ರಥಮ ಕಂತಾಗಿ ಬಿಡುಗಡೆ ಮಾಡಲಾಗಿರುತ್ತದೆ.

ಮೇಲೆ (2) ರಲ್ಲಿ ಓದಲಾದ ಆಯುಕ್ತರು, ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆರವರ ಪತ್ರದಲ್ಲಿ 2008–09ನೇ ಸಾಲಿನಲ್ಲಿ ಆರ್ಯಭಟ ಮಾಹಿತಿ ತಂತ್ರಜ್ಞಾನ ಉದ್ಯಾನ, ರಸ್ತೆಗಳ ಅಭಿವೃದ್ಧಿಗಾಗಿ ರೂ. 200 ಲಕ್ಷ ಬಿಡುಗಡೆ ಮಾಡಲಾಗಿದ್ದು, ಸದರಿ ಕಾಮಗಾರಿಯು ಮುಕ್ತಾಯ ಹಂತದಲ್ಲಿದ್ದು, ಈಗ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಕಂಪನಿಗಳ ಹಂಚಿಕೆಯಾದ ಜಾಗವನ್ನು ಸಂಪೂರ್ಣವಾಗಿ ಅಂದರೆ, ಕಾಂಪೌಂಡ್ ಗೋಡೆ, ಲ್ಯಾಂಡ್ ಸ್ಕೇಪಿಂಗ್, ನೀರು ಸರಬರಾಜು ಯೋಜನೆ, ಜಲಾಗಾರದೊಂದಿಗೆ ವಿದ್ಯುತ್ತೀಕರಣ ಹಾಗೂ ಆಪ್ಟಿಕಲ್ ಕೇಬಲ್ ಅಳವಡಿಸಲು ರೂ. 716 ಲಕ್ಷಗಳ ಅಂದಾಜು ಪಟ್ಟಿಯನ್ನು ಸಲ್ಲಿಸಿ, ಈ ಅನುದಾನವನ್ನು ವಿಶೇಷವಾಗಿ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಆರ್ಯಭಟ ಮಾಹಿತಿ ತಂತ್ರಜ್ಞಾನ ಉದ್ಯಾನಕ್ಕೆ 2009–10ನೇ ಸಾಲಿನ ಆಯವ್ಯಯದಲ್ಲಿ ಒದಗಿಸಲಾಗಿರುವ 2.00 ಕೋಟಿಗಳ ಅನುದಾನದಲ್ಲಿ ರೂ. 1.00 ಕೋಟಿ ಅನುದಾನ ಬಿಡುಗಡೆ ಮಾಡಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಮಾತಂಇ 25, ಎಂಡಿಎ 2008, ಬೆಂಗಳೂರು, ದಿನಾಂಕ: 10ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಆರ್ಯಭಟ ಮಾಹಿತಿ ತಂತ್ರಜ್ಞಾನ ಉದ್ಯಾನದ ಅಭಿವೃದ್ಧಿಗಾಗಿ 2009–10ನೇ ಸಾಲಿನ ಆಯವ್ಯಯದಲ್ಲಿ ಒದಗಿಸಲಾಗಿರುವ ರೂ. 2.00 ಕೋಟಿಗಳ ಅನುದಾನದಲ್ಲಿ ರೂ. 1.00 ಕೋಟಿ ಅನುದಾನವನ್ನು (ರೂ. ಒಂದು ಕೋಟಿ ಮಾತ್ರ) ಆಯುಕ್ತರು, ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆರವರಿಗೆ ಹಂಚಿಕೆ ಮಾಡುವ ಸಲುವಾಗಿ ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಇವರಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ಆಯುಕ್ತರು, ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆರವರಿಗೆ ವಿತರಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ **"5465–01–190–1–12 ಹುಬ್ಬಳ್ಳಿ ಆರ್ಯಭಟ ಮಾಹಿತಿ ತಂತ್ರಜ್ಞಾನ ಪಾರ್ಕ್ (ಯೋಜನೆ)"** ಅಡಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಅನುದಾನದ ಬಳಕೆಯ ಬಗ್ಗೆ ಆಯುಕ್ತರು, ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆರವರಿಂದ ಉಪಯೋಗಿತಾ ದೃಢೀಕರಣ ಪತ್ರವನ್ನು ವೆಚ್ಚ ಮಾಡಿದ ಅನುದಾನದ ವಿವರಗಳ ಜೊತೆಗೆ ಪಡೆದು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಆಇ 1 ಟಿಎಫ್‌ಪಿ 2008, ದಿನಾಂಕ:16.5.2008ರನ್ವಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ವಿ. ಕೃಷ್ಣಮೂರ್ತಿ**

ಪಿ.ಆರ್. 1906 ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಶ್ರೀಮತಿ ಜಯದೇವಿ. ಕೆ.ಹೆಚ್.ಎಸ್., ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರ ವಿರುದ್ಧ ದಾಖಲಾಗಿರುವ ಲಂಚದ ಪ್ರಕರಣಕ್ಕೆ ಸಂಬಂಧಿಸಿದಂತೆ ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸುವ ಕುರಿತು-ಆದೇಶ.

**ಓದಲಾಗಿದೆ:** 1. ಪೊಲೀಸ್ ಇನ್ಸ್‌ಪೆಕ್ಟರ್, ಪೊಲೀಸ್ ವಿಂಗ್, ನಗರ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ನಗರ ಜಿಲ್ಲೆ ಇವರಿಗೆ ಹೆಸರಿಸಿರುವ ತಿಳುವಳಿಕೆ ಪತ್ರ ಲೋ.ಮೊ.ಸಂಖ್ಯೆ 53/2009 ದಿ:25-7-2009.

2. ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ನಗರ ಜಿಲ್ಲೆರವರು ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರುರವರಿಗೆ ಹೆಸರಿಸಿರುವ ಪತ್ರ ಸಂ.ಉಪನಿ.ಬೆಂ/ನ/ಅಂಕವಿ/ಲೋ. ಪತ್ರ/2009-10/452/ದಿನಾಂಕ:27-7-2009.

3. ನಿರ್ದೇಶಕರು, ಅಂಗವಿಕಲರ ಮತ್ತು ಹಿರಿಯ ನಾಗರೀಕರ ಕಲ್ಯಾಣ ಇಲಾಖೆ ಇವರ ಕಛೇರಿಯ ಪತ್ರ ಸಂಖ್ಯೆ ನಿಅಕಇ/ಸಿಬ್ಬಂದಿ/ಮಾಹಿತಿ/2008-09/5931/ ದಿ: 29-07-2009.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ: 25-07-2009 ರ ಪತ್ರದಲ್ಲಿ ಪೊಲೀಸ್ ಇನ್ಸ್‌ಪೆಕ್ಟರ್, ಪೊಲೀಸ್ ವಿಂಗ್, ನಗರ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಶ್ರೀಮತಿ ಜಯದೇವಿ.ಕೆ.ಹೆಚ್.ಎಸ್., ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ರವರು ದಿ:25-7-2009 ರಂದು ಫಿರ್ಯಾದುದಾರರಾದ ಶ್ರೀಮತಿ ರೇನಿಟಾ ಸೋಜಾ ಇವರಿಂದ ಲಂಚದ ಹಣ ರೂ.20,000/- ಗಳನ್ನು ಒತ್ತಾಯಿಸಿ ಸ್ವೀಕರಿಸುತ್ತಿದ್ದಾಗ ಲೋಕಾಯುಕ್ತ ಪೊಲೀಸರ ಬಲೆಯಲ್ಲಿ ಸಿಕ್ಕಿಬಿದ್ದಿದ್ದು, ಅವರನ್ನು ಲಂಚ ಸ್ವೀಕಾರದ ಆರೋಪದ ಮೇಲೆ ದಿ:25-7-2009 ರಂದು ಸಂಜೆ 4.30 ಗಂಟೆಗೆ ದಸ್ತಗಿರಿ ಮಾಡಿರುತ್ತಾರೆಂದು ಹಾಗೂ ಅವರನ್ನು ಘನ 23 ನೇ ಹೆಚ್ಚುವರಿ ಸಿಟಿ ಮತ್ತು ಸಿವಿಲ್ ನ್ಯಾಯಾಧೀಶರ ಮುಂದೆ ಹಾಜರುಪಡಿಸಲಾಗುವುದೆಂದು ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ನಗರ ಜಿಲ್ಲೆ ರವರಿಗೆ ತಿಳಿಸಿರುತ್ತಾರೆ. ಈ ಸಂಬಂಧದಲ್ಲಿ ಮೇಲೆ (2) ರಲ್ಲಿ ಓದಲಾದ ದಿ:27-7-2009 ರ ಪತ್ರದಲ್ಲಿ ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ನಗರ ಜಿಲ್ಲೆ ಇವರು ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ರವರಿಗೆ ಶ್ರೀಮತಿ ಜಯದೇವಿ.ಕೆ.ಹೆಚ್.ಎಸ್., ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರು ಲೋಕಾಯುಕ್ತರ ಬಲೆಗೆ ಸಿಕ್ಕಿಬಿದ್ದು ದಸ್ತಗಿರಿ ಆಗಿರುವ ವಿಷಯವನ್ನು ತಿಳಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ದಿ:29-07-2009 ರ ಪತ್ರದಲ್ಲಿ ನಿರ್ದೇಶಕರು, ಅಂಗವಿಕಲರ ಮತ್ತು ಹಿರಿಯ ನಾಗರೀಕರ ಕಲ್ಯಾಣ ಇಲಾಖೆ ಇವರು ಶ್ರೀಮತಿ ಜಯದೇವಿ.ಕೆ.ಹೆಚ್.ಎಸ್., ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರು ಲೋಕಾಯುಕ್ತರ ಬಲೆಗೆ ಸಿಕ್ಕಿಬಿದ್ದು ದಸ್ತಗಿರಿಯಾಗಿ ಕ.ಸ.ಸೇ.ನಿ 1987 ನಿಯಮ 10 (2) (ಎ) ರೀತ್ಯಾ 48 ಗಂಟೆಗಳಿಗಿಂತ ಹೆಚ್ಚಿನ ಅವಧಿಯಲ್ಲಿ ನ್ಯಾಯಾಂಗ ಬಂಧನದಲ್ಲಿದಿದ್ದರಿಂದ ಸದರಿಯವರನ್ನು ಅಮಾನತ್ತುಗೊಳಿಸುವ ಬಗ್ಗೆ ಸೂಕ್ತ ಕ್ರಮ ಜರುಗಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ನಿರ್ದೇಶಕರ ಶಿಫಾರಸ್ಸನ್ನು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಮಮಇ 420 ಎಸ್‌ಜೆಡಿ 2009, ಬೆಂಗಳೂರು, ದಿನಾಂಕ: 31ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀಮತಿ ಜಯದೇವಿ.ಕೆ.ಹೆಚ್.ಎಸ್., ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರನ್ನು ಕರ್ನಾಟಕ ನಾಗರಿಕ ಸೇವಾ (ಸಿ.ಸಿ.ಎ) ನಿಯಮಾವಳಿಗಳು 1957ರ ನಿಯಮ 10(1)(ಎ) ರ ಮೇರೆಗೆ ದಿ:25.7.2009 ರಿಂದಲೇ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳು 1957ರ ನಿಯಮ 98(1)ರನ್ವಯ ಜೀವನಾಂಶ ಭತ್ಯೆ ಪಡೆಯಲು ಅರ್ಹರಾಗಿರುತ್ತಾರೆ. ಅಲ್ಲದೆ ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯು ಸಕ್ಷಮ ಪ್ರಾಧಿಕಾರದ ಲಿಖಿತ ಅನುಮೋದನೆ ಇಲ್ಲದೆ ಕೇಂದ್ರ ಸ್ಥಾನವನ್ನು ಬಿಡಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನರಸಿಂಹಯ್ಯ**

ಪಿ.ಆರ್. 1907

ಸರ್ಕಾರದ ಅಧೀನ ಕಾರ್ಯದರ್ಶಿ–2(ಪ್ರಭಾರ),
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ವೈದ್ಯಕೀಯ ಮುರುಪಾವತಿ ಬಿಲ್ಲುಗಳಿಗೆ ಮೇಲು ಸಹಿ ಮಾಡುವ ಪ್ರಾಧಿಕಾರವನ್ನು ಮುಖ್ಯ ಆಡಳಿತಾಧಿಕಾರಿಗಳಿಗೆ ನೀಡುವ ಬಗ್ಗೆ.

**ಪ್ರಸ್ತಾವನೆ:**

ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯಡಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿ/ಸಿಬ್ಬಂದಿ ವರ್ಗದವರಿಗೆ ರೂ. 25,000/– ಗಳೊಳಗಿನ ವೈದ್ಯಕೀಯ ಮರುಪಾವತಿಯ ಬಿಲ್ಲುಗಳಿಗೆ ಮೇಲು ಸಹಿ ಮಾಡುವ ಅಧಿಕಾರವನ್ನು ಮುಖ್ಯ ಆಡಳಿತಾಧಿಕಾರಿ, ಕೆ.ಹೆಚ್.ಎಸ್.ಡಿ.ಆರ್.ಪಿ, ಬೆಂಗಳೂರು, ಇವರಿಗೆ ಪ್ರತ್ಯಾಯೋಜಿಸುವುದು ಆಡಳಿತದ ಹಿತದೃಷ್ಟಿಯಿಂದ ಸೂಕ್ತವೆಂದು ಕಂಡುಬಂದಿರುತ್ತದೆ.

ಆದ್ದರಿಂದ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಎಫ್‌ಡಬ್ಲ್ಯೂ/ಕೆ.ಹೆಚ್.ಎಸ್.ಡಿಆರ್.ಪಿ/ಸಿಎಒ/ಎಎಸ್‌ಟಿ/32/2007–08, ಬೆಂಗಳೂರು, ದಿನಾಂಕ: 30ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರವು ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯಡಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅಧಿಕಾರಿ/ಸಿಬ್ಬಂದಿ ವರ್ಗದವರಿಗೆ ರೂ.25,000/– ಗಳೊಳಗಿನ ವೈದ್ಯಕೀಯ ಮರುಪಾವತಿಯ ಬಿಲ್ಲುಗಳಿಗೆ ಮೇಲು ಸಹಿ ಮಾಡುವ ಅಧಿಕಾರವನ್ನು ಮುಖ್ಯ ಆಡಳಿತಾಧಿಕಾರಿ, ಕೆ.ಹೆಚ್.ಎಸ್.ಡಿ.ಆರ್.ಪಿ. ಬೆಂಗಳೂರು, ಇವರಿಗೆ ಪ್ರತ್ಯಾಯೋಜಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುಷಮಾ ಗೋಡಬೋಲೆ**

ಪಿ.ಆರ್. 1910

ಸರ್ಕಾರದ ಉಪ ಕಾರ್ಯದರ್ಶಿ, ಕೆಹೆಚ್‌ಎಸ್‌ಡಿಆರ್‌ಪಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ವಿಷಯ:** ಕೆ.ಹೆಚ್.ಎಸ್.ಡಿ.ಆರ್.ಪಿ. ಯೋಜನೆಯಡಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಎನ್. ಪುರುಷೋತ್ತಮ್ ಕಂಪ್ಯೂಟರ್ ಟೆಕ್ನೀಷಿಯನ್ ರವರಿಗೆ ಸಂಭಾವನೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂ. ಆಕುಕ (ಯೋ) 44 ಡಬ್ಲ್ಯೂಬಿಎ 2009, ದಿನಾಂಕ: 28.02.2009.
2. ಅಧಿಸೂಚನೆ ಸಂಖ್ಯೆ ಡಿಪಿಎಆರ್ 79 ಎಸ್‌ಆರ್‌ಡಿ 97, ದಿನಾಂಕ: 10.08.1999.
3. ದಿನಾಂಕ: 14.07.2009 ರಂದು ನಡೆದ ಕಾರ್ಯಕ್ರಮ ಚಾಲನಾ ಸಮಿತಿಯ 15ನೇ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಸರ್ಕಾರಿ ನೌಕರನಿಗೆ ವೇತನ ಆಯೋಗದಲ್ಲಿ ವೇತನವನ್ನು ಹೆಚ್ಚಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯಡಿ ಮಾನವ ಸಂಪನ್ಮೂಲ ವತಿಯಿಂದ ಗುತ್ತಿಗೆ ಆಧಾರದ ಮೇಲೆ ಪಡೆದಿರುವ ಸಿಬ್ಬಂದಿಯವರಿಗೂ ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಸಂಭಾವನೆಯನ್ನು ಹೆಚ್ಚಿಸಲಾಗಿತ್ತು. ಶ್ರೀ ಎನ್. ಪುರುಷೋತ್ತಮ್ ಇವರು ಯೋಜನಾ ಕಛೇರಿಯಿಲ್ಲಿ ಮಾನವ ಸಂಪನ್ಮೂಲ ವತಿಯಿಂದ ಕೆಹೆಚ್‌ಎಸ್‌ಡಿಆರ್‌ಪಿ–ಎನ್‌ಆರ್‌ಹೆಚ್‌ಎಂ ಮತ್ತು ಪ್ರಾಧನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯದಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಇದರ ಜೊತೆಗೆ ಯೋಜನಾ ಕಛೇರಿಯಲ್ಲಿ ಗಣಕ ಯಂತ್ರಗಳಿಗೆ ಸಂಬಂಧಿಸಿದಂತೆ ಎಲ್ಲಾ ವಿಧದ ತಾಂತ್ರಿಕ ಸಲಹೆ ನೀಡುವುದರಲ್ಲಿ, ಅವಶ್ಯವಿದ್ದಲ್ಲಿ ಸೂಕ್ತ ತಾಂತ್ರಿಕ ವ್ಯವಸ್ಥೆಯನ್ನು ಅಳವಡಿಸುವುದರಲ್ಲಿ, ಸಣ್ಣ ಪುಟ್ಟ ದುರಸ್ತಿಗಳನ್ನು ಕೈಗೊಂಡು, ಸಭೆಗಳಲ್ಲಿ ಸೂಕ್ತ ವ್ಯವಸ್ಥೆ ಮಾಡುವುದರಲ್ಲಿ ಸಹಕರಿಸುತ್ತಿದ್ದಾರೆ. ಇಲ್ಲಿಯವರೆಗೆ ಇವರ ಸೇವೆಯು ತೃಪ್ತಿಕರವಾಗಿರುತ್ತದೆ.

ಉಲ್ಲೇಖ (1) ರನ್ವಯ ಮಾನವ ಸಂಪನ್ಮೂಲ ನೌಕರರಿಗೆ ಸಂಭಾವನೆ ಹೆಚ್ಚಿಸಿರುವ ಹಿನ್ನೆಲೆಯಲ್ಲಿ ಶ್ರೀ ಎನ್. ಪುರುಷೋತ್ತಮ್ ಇವರ ಸಂಭಾವನೆಯನ್ನು ಹೆಚ್ಚಿಸಿರುವುದಿಲ್ಲ. ಸದರಿ ಕಂಪ್ಯೂಟರ್ ಟೆಕ್ನೀಷಿಯನ್ ಇವರಿಗೆ ರೂ.8000.00 ಗಳ ಸಂಭಾವನೆಯನ್ನು ನಿಗದಿಪಡಿಸಿದ್ದು, ಸರ್ಕಾರದಲ್ಲಿ ಇನ್‌ಪುಟ್/ಔಟ್‌ಪುಟ್ ಮ್ಯಾನೇಜರ್, ಹಾರ್ಡ್‌ವೇರ್ ಸೂಪರ್‌ವೈಸರ್ ಮತ್ತು ಅಸಿಸ್ಟೆಂಟ್ ಸೂಪರ್‌ವೈಸರ್ ಆಗಿ ಕಾರ್ಯ ನಿರ್ವಹಿಸುತ್ತಿರುವ ಸರ್ಕಾರಿ ನೌಕರರಿಗೆ ಉಲ್ಲೇಖ (2) ರ ಅಧಿಸೂಚನೆ ಸಂಖ್ಯೆ ಡಿಪಿಎಆರ್ 79 ಎಸ್‌ಆರ್‌ಡಿ 97 ದಿನಾಂಕ: 10.08.1999ರ Karnataka General Services (Government Computer–Centre and Cadre Recruitment) Rules 1997 ರನ್ವಯ ಪರಿಷ್ಕೃತ ವೇತನ ಶ್ರೇಣಿ ರೂ. 10,800–20,025/– ಗಳ ಪ್ರಕಾರ ವೇತನವನ್ನು ನಿಗದಿಪಡಿಸಲಾಗಿದೆ. ಸರ್ಕಾರದ ಉಲ್ಲೇಖಿತ ಆದೇಶದನ್ವಯ ಹಾರ್ಡ್‌ವೇರ್ ಸೂಪರ್‌ವೈಸರ್ ಇನ್‌ಪುಟ್/ಔಟ್‌ಪುಟ್ ಮ್ಯಾನೇಜರ್ ಹುದ್ದೆಯ ತತ್ಸಮಾನವಾಗಿ ಶ್ರೀ ಎನ್. ಪುರುಷೋತ್ತಮ್ ಇವರು ಕೆಲಸ ನಿರ್ವಹಿಸುತ್ತಿರುವರು. ಆದ್ದರಿಂದ ಮಾನವ ಸಂಪನ್ಮೂಲ ಸಂಸ್ಥೆಯ ಮೂಲಕ ಗುತ್ತಿಗೆ ಆಧಾರದ ಮೇಲೆ ಪಡೆದಿರುವ ಕಂಪ್ಯೂಟರ್ ಟೆಕ್ನೀಷಿಯನ್ ಸಿಬ್ಬಂದಿಯವರಿಗೂ ಸಂಭಾವನೆಯನ್ನು ಹೆಚ್ಚಿಸಲು ದಿನಾಂಕ: 14.07.2009 ರಂದು ನಡೆದ ಕಾರ್ಯಕ್ರಮ ಚಾಲನಾ ಸಮಿತಿಯ 15ನೇ ಸಭೆಯಲ್ಲಿ ಪ್ರಸ್ತಾಪಿಸಲಾಗಿದ್ದು, ಸಮಿತಿಯು ಮೇಲೆ (3) ರಲ್ಲಿ ಓದಲಾದ ನಡವಳಿಕೆಗಳಲ್ಲಿ ಒಪ್ಪಿಗೆ ನೀಡಿರುತ್ತದೆ. ಅದರಂತೆ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ (ಯೋ) 93, ಡಬ್ಲ್ಯೂಬಿಎ 2009, ಬೆಂಗಳೂರು, ದಿನಾಂಕ: 4ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯಡಿ ಮಾನವ ಸಂಪನ್ಮೂಲ ಸೇವಾ ಸಂಸ್ಥೆ ವತಿಯಿಂದ ಗುತ್ತಿಗೆ ಆಧಾರದ ಮೇಲೆ ಕೆಲಸ ನಿರ್ವಹಿಸುತ್ತಿರುವ ಶ್ರೀ ಎನ್. ಪುರುಷೋತ್ತಮ್ ಕಂಪ್ಯೂಟರ್ ಟೆಕ್ನೀಷಿಯನ್ ಇವರಿಗೆ ದಿನಾಂಕ: 01.06.2009 ರಿಂದ ಜಾರಿಗೆ ಬರುವಂತೆ ಈ ಕೆಳಗೆ ನಮೂದಿಸಿದಂತೆ ಸಂಭಾವನೆಯನ್ನು ಹೆಚ್ಚಿಸಿ ಆದೇಶಿಸಿದೆ.

| ಕಂಪ್ಯೂಟರ್ ಟೆಕ್ನೀಷಿಯನ್ | ಪ್ರಸ್ತುತ ಪಡೆಯುತ್ತಿರುವ ಮಾಹೆಯಾನ ಸಂಭಾವನೆಯ ವಿವರ (ರೂ.ಗಳಲ್ಲಿ) | ಹೆಚ್ಚಿಸಲು ಅನುಮೋದಿಸಲಾದ ಸಂಭಾವನೆ (ರೂ.ಗಳಲ್ಲಿ) |
|---|---|---|
| 1) ಸಿಬ್ಬಂದಿಯ ಕೈಗೆ ಪಾವತಿಸುವ ಸಂಭಾವನೆ | 6.900 | 10,350.00 |
| 2) ನೌಕರರ ವಂತಿಗೆ<br>ಪಿ.ಎಫ್. ಇಎಫ್ಐ | (ಪಿ.ಎಫ್): 960.00<br>(ಇ.ಎಸ್.ಐ.) 140.00 | 1,650.00 |
| 3) ಉದ್ಯೋಗದಾತರ ವಂತಿಗೆ<br>ಪಿ.ಎಫ್<br>ಇಎಸ್ಐ | (ಪಿ.ಎಫ್) 1089.00<br>(ಇ.ಎಸ್.ಐ.) 380.00 | (ಪಿ.ಎಫ್) 1673.00<br>(ಇ.ಎಸ್.ಐ.) 570.00 |
| 4) ಏಜನ್ಸಿಯ ವಂತಿಗೆ | – | – |
| 5) ವೃತ್ತಿ ತೆರಿಗೆ | ಅನ್ವಯವಾಗುವಂತೆ | ಅನ್ವಯವಾಗುವಂತೆ |
| ಒಟ್ಟು | 9469.00<br>(ಏಜನ್ಸಿ ಶುಲ್ಕ ಹೊರತುಪಡಿಸಿ) | 14,203.00<br>(ಏಜನ್ಸಿ ಶುಲ್ಕ ಹೊರತುಪಡಿಸಿ |

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ "2210–06–800–0–84–051" (ಸಾಮಾನ್ಯ ವೆಚ್ಚ) ದ ಅಡಿಯಲ್ಲಿ 2009–10ನೇ ಸಾಲಿನಲ್ಲಿ ಭರಿಸತಕ್ಕದ್ದು. ಇವರು ಸಂಭಾವನೆಯನ್ನು ಸಂಬಂಧಿಸಿದ ಏಜೆನ್ಸಿಯಿಂದ ಪಡೆಯತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುಷಮಾ ಗೋಡಬೋಲೆ**

ಪಿ.ಆರ್. 1911

ಸರ್ಕಾರದ ಉಪ ಕಾರ್ಯದರ್ಶಿ, ಕೆ.ಹೆಚ್.ಎಸ್.ಡಿಆರ್.ಪಿ.
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ:** ಅಖಿಲ ಭಾರತ ಪೊಲೀಸ್ ಕ್ರೀಡಾಕೂಟಗಳಲ್ಲಿ ಭಾಗವಹಿಸಲು ಆಯ್ಕೆಯಾಗಿರುವ ಕ್ರೀಡಾಪಟುಗಳಿಗಾಗಿ ಆಯೋಜಿಸುವ ವಿಶೇಷ ತರಬೇತಿ ಅವಧಿಯಲ್ಲಿ ಈಗ ನೀಡುತ್ತಿರುವ ಪೌಷ್ಠಿಕ ಆಹಾರ ಭತ್ಯೆಯ ದರವನ್ನು ಪರಿಷ್ಕರಿಸಿ ರೂ. 100/–ಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪತ್ರ ಸಂಖ್ಯೆ: 40/ಕ್ರೀಡೆ/2008–09, ದಿನಾಂಕ: 12.05.2009

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಪ್ರತಿವರ್ಷ ಬೇರೆ ಬೇರೆ ರಾಜ್ಯ, ಕೇಂದ್ರಾಡಳಿತ ಪ್ರದೇಶ ಮತ್ತು ಕೇಂದ್ರೀಯ ಪೊಲೀಸ್ ಸಂಘಟನೆಗಳು ಸರದಿ ಪ್ರಕಾರ ಆಯೋಜಿಸುವ ಅಖಿಲ ಭಾರತ ಪೊಲೀಸ್ ಕ್ರೀಡಾಕೂಟಗಳಲ್ಲಿ ಭಾಗವಹಿಸಲು ಆಯ್ಕೆಯಾಗುವ ಪೊಲೀಸ್ ಕೀಡಾಪಟುಗಳಿಗೆ, ಕ್ರೀಡಾಕೂಟದಲ್ಲಿ ಭಾಗವಹಿಸಲು ತೆರಳುವ ಪೂರ್ವದಲ್ಲಿ ಆಯೋಜಿಸುವ ವಿಶೇಷ ತರಬೇತಿ ಶಿಬಿರದ ಅವಧಿಯಲ್ಲಿ ಪ್ರತಿನಿತ್ಯ ಸೇವಿಸುವ ಆಹಾರದೊಂದಿಗೆ, ತರಬೇತಿ ಶಿಬಿರದ ಕಠಿಣತೆಯನ್ನು ಸಹಿಸಲು ಅಧಿಕ ಪೌಷ್ಠಿಕಾಂಶವುಳ್ಳ ಆಹಾರಪದಾರ್ಥಗಳನ್ನು ಪಡೆದು ಸೇವಿಸುವ ಸಲುವಾಗಿ ಸರ್ಕಾರದ ಆದೇಶ ಸಂಖ್ಯೆ ಹೆಚ್.ಡಿ/392/ ಇಎಫ್‌ಎಸ್/99, ದಿನಾಂಕ:6.6.2000 ರಲ್ಲಿ ಒಬ್ಬ ಕ್ರೀಡಾಪಟುವಿಗೆ ಒಂದು ದಿನಕ್ಕೆ ರೂ. 25.00 ರಂತೆ 30 ದಿವಸಗಳಿಗೆ ಒಟ್ಟು ರೂ. 750.00 ಪೌಷ್ಠಿಕ ಆಹಾರ ಭತ್ಯೆಯಾಗಿ ಮಂಜೂರು ಮಾಡಲು ಅವಕಾಶ ಮಾಡಲಾಗಿದೆಯೆಂದು, ಆದರೆ ಈ ಸರ್ಕಾರಿ ಆದೇಶ ಹೊರಡಿಸಿ 8 ವರ್ಷಗಳಾಗಿದ್ದು, ಈಗ ಪೌಷ್ಠಿಕ ಆಹಾರ ಪದಾರ್ಥಗಳ ಬೆಲೆಯು ಕೂಡ ಗಣನೀಯವಾಗಿ ಹೆಚ್ಚಾಗಿರುವ ಹಿನ್ನೆಲೆಯಲ್ಲಿ, ಈ ದರವನ್ನು ರೂ. 25.00 ರಿಂದ ರೂ. 100.00 ಕ್ಕೆ ಪರಿಷ್ಕರಿಸಿ ಹೆಚ್ಚಿಸಲು ಹಾಗೂ ಇದರಿಂದಾಗಿ ತಗಲುವ ವಾರ್ಷಿಕ ಅಂದಾಜು ವೆಚ್ಚ ರೂ. 5,22,000.00 ಗಳಿಗೆ ಸರ್ಕಾರದ ಆದೇಶವನ್ನು ಹೊರಡಿಸುವಂತೆ ಕೋರಿದ್ದಾರೆ.

ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 126 ಇಎಫ್‌ಎಸ್ 2009, ಬೆಂಗಳೂರು, ದಿನಾಂಕ: 7ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಅಖಿಲ ಭಾರತ ಪೊಲೀಸ್ ಕ್ರೀಡಾಕೂಟಗಳಲ್ಲಿ ಭಾಗವಹಿಸಲು ಆಯ್ಕೆಯಾಗುವ ಕ್ರೀಡಾಪಟುಗಳಿಗಾಗಿ ಆಯೋಜಿಸುವ ವಿಶೇಷ ತರಬೇತಿ ಅವಧಿಯಲ್ಲಿ ಈಗ ನೀಡುತ್ತಿರುವ ಪೌಷ್ಠಿಕ ಆಹಾರ ಭತ್ಯೆಯ ದರವನ್ನು ದಿನಕ್ಕೆ ರೂ. 25/– ರಿಂದ ರೂ.50/– ಗಳಿಗೆ (ಐವತ್ತು ರೂಪಾಯಿಗಳು ಮಾತ್ರ) ಪರಿಷ್ಕರಿಸಿ ಈ ಮೂಲಕ ಸರ್ಕಾರದ ಮಂಜೂರಾತಿ ನೀಡಿದೆ.

ಸದರಿ ವೆಚ್ಚವನ್ನು 2009–10ನೇ ಸಾಲಿನ ಲೆಕ್ಕ ಶೀರ್ಷಿಕೆ 2055–00–001–0–01–051 ಸಾಮಾನ್ಯ ವೆಚ್ಚಗಳು ಇದರಡಿಯಲ್ಲಿ ಒದಗಿಸಲಾದ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 611 ವೆಚ್ಚ–11/2009, ದಿನಾಂಕ: 27/07/2009ರ ಸಹಮತಿ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1922

**ಬಿ.ಎಂ. ಲಕ್ಷ್ಮೀನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ)

**ವಿಷಯ:** 2009–10ನೇ ಸಾಲಿನ ಪೊಲೀಸ್ ಆಧುನೀಕರಣ ಕ್ರಿಯಾ ಯೋಜನೆಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪತ್ರ ಸಂಖ್ಯೆ:1/ಎಡಿಜಿಪಿ/ಟಿಟಿಎಂ/ ಎಂಡಿಎನ್/2009–10, ದಿನಾಂಕ: 06.06.2009.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 6/6/2009ರ ಪತ್ರದಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿ, 2009–10ನೇ ಸಾಲಿನ ಪೊಲೀಸ್ ಆಧುನೀಕರಣ ಯೋಜನೆಯಡಿ ದಿನಾಂಕ:29/05/2009 ರಂದು ಕೇಂದ್ರ ಸರ್ಕಾರವು ರಾಜ್ಯ ಸರ್ಕಾರಕ್ಕೆ ರೂ. 8,88,00,000/– ಗಳನ್ನು ಮಂಜೂರು ಮಾಡಿದೆ. ಸದರಿ ಅನುದಾನವನ್ನು 2009–10ನೇ ಸಾಲಿನ ಕ್ರಿಯಾ ಯೋಜನೆಯ ಕಾರ್ಯ ಚಟುವಟಿಕೆಗಳಿಗಾಗಿ ಉಪಯೋಗಿಸಿಕೊಳ್ಳಲು ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರು ಬಿಡುಗಡೆ ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ:01:ಪಿಎಫ್‌ಎಸ್:2009, ಬೆಂಗಳೂರು, ದಿನಾಂಕ: 1ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕೇಂದ್ರ ಸರ್ಕಾರವು ಬಿಡುಗಡೆ ಮಾಡಿರುವ ರೂ. 8,88,00,000/– ಗಳನ್ನು (ಎಂಟು ಕೋಟಿ, ಎಂಭತ್ತೆಂಟು ಲಕ್ಷ ರೂಪಾಯಿಗಳು ಮಾತ್ರ) ಅನುಮೋದನೆಗೊಂಡ ಕ್ರಿಯಾ ಯೋಜನೆಯ ಕಾರ್ಯಚಟುವಟಿಕೆಗಳಿಗೆ ಉಪಯೋಗಿಸಿಕೊಳ್ಳಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 622 ವೆಚ್ಚ–11/2009, ದಿನಾಂಕ:20/07/2009ರ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1923

**ಬಿ.ಎಂ. ಲಕ್ಷ್ಮೀನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ)

**ಕಾರ್ಮಿಕ ಸಚಿವಾಲಯ**

**ವಿಷಯ:** ಡಾ: ಆರ್. ವನಜಾಕ್ಷಿ, ವಿಮಾ ವೈದ್ಯಾಧಿಕಾರಿ, ಕಾರಾವಿ ಚಿಕಿತ್ಸಾಲಯ, ದಾಸರಹಳ್ಳಿ, ಬೆಂಗಳೂರು, ಇವರು ಕರ್ತವ್ಯದಿಂದ ಅನಧಿಕೃತವಾಗಿ ಗೈರು ಹಾಜರಾದ ಬಗ್ಗೆ ಶಿಸ್ತು ಕ್ರಮ ಕೈಗೊಳ್ಳುವ ಬಗ್ಗೆ.

**ಓದಲಾಗಿದೆ:**
1. ನಿರ್ದೇಶಕರು, ಕಾರಾವಿ ಯೋಜನೆ, ವೈದ್ಯಕೀಯ ಸೇವೆಗಳು, ಇವರ ಪತ್ರ ಸಂಖ್ಯೆ:ESIS/EV/34/05—06 ದಿನಾಂಕ: 06.02.2006
2. ಸರ್ಕಾರದ ನೋಟೀಸ್ ಸಂಖ್ಯೆ ಕಾಇ 117 ಎಲ್ಎಸ್ಐ 2006, ದಿನಾಂಕ: 22.05.2006
3. ನಿರ್ದೇಶಕರು, ಕಾರಾವಿ ಯೋಜನೆ ವೈದ್ಯಕೀಯ ಸೇವೆಗಳು, ಇವರ ಪತ್ರ ಸಂಖ್ಯೆ:ESIS/EV/34/05—06 ದಿನಾಂಕ: 21.08.2006
4. ಸರ್ಕಾರದ ಆದೇಶ ಸಂಖ್ಯೆ: ಕಾಇ 117 ಎಲ್ಎಸ್ಐ 2006, ದಿನಾಂಕ : 12.10.2006
5. ವಿಚಾರಣಾಧಿಕಾರಿಗಳ ದಿನಾಂಕ: 09.05.2007ರ ವರದಿ
6. 2ನೇ ಕಾರಣ ಕೇಳುವ ನೋಟೀಸ್ ಸಂಖ್ಯೆ: ಕಾಇ 117 ಎಲ್ಎಸ್ಐ 2006, ದಿನಾಂಕ:28.06.2007
7. ನಿರ್ದೇಶಕರು, ಕಾರಾವಿ ಯೋಜನೆ ವೈದ್ಯಕೀಯ ಸೇವೆಗಳು ಇವರ ಪತ್ರ ಸಂಖ್ಯೆ:ESIS/EV/34/05—06 ದಿನಾಂಕ: 27.08.2007

**ಪ್ರಸ್ತಾವನೆ:**

ನಿರ್ದೇಶಕರು, ಕಾರಾವಿ ಯೋಜನೆ ವೈದ್ಯಕೀಯ ಸೇವೆಗಳು ರವರು ಮೇಲೆ (1) ರಲ್ಲಿ ಓದಲಾದ ದಿನಾಂಕ:6.2.2006ರ ಪತ್ರದಲ್ಲಿ ಡಾ: ಆರ್. ವನಜಾಕ್ಷಿ, ವಿಮಾ ವೈದ್ಯಾಧಿಕಾರಿ, ಕಾ.ರಾ.ವಿ. ಚಿಕಿತ್ಸಾಲಯ, ದಾಸರಹಳ್ಳಿ, ಬೆಂಗಳೂರು, ಇವರನ್ನು ಕಾ.ರಾ.ವಿ. ನಿಗಮದ ಮಾದರಿ ಆಸ್ಪತ್ರೆ, ರಾಜಾಜಿನಗರ, ಬೆಂಗಳೂರು, ಇಲ್ಲಿಗೆ ದಿನಾಂಕ: 01.09.2005 ರಂದು ಕಾರ್ಯವ್ಯವಸ್ಥೆ ಮೇರೆಗೆ ನಿಯೋಜಿಸಲಾಗಿದ್ದು, ವೈದ್ಯರು ನಿಯೋಜನೆ ಮಾಡಿದ್ದ ಸ್ಥಳಕ್ಕೆ ಹಾಜರಾಗದೆ ದಿನಾಂಕ:1.09.2005 ರಿಂದ ಅನಧಿಕೃತವಾಗಿ ಗೈರು ಹಾಜರಾಗಿರುವ ಆರೋಪ ಕುರಿತು ಇಲಾಖಾ ವಿಚಾರಣೆ ನಡೆಸುವಂತೆ ಕೋರಿದ್ದರು. ಡಾ:ಆರ್. ವನಜಾಕ್ಷಿ, ವಿಮಾ ವೈದ್ಯಾಧಿಕಾರಿ ಇವರ ಅನಧಿಕೃತ ಗೈರು ಹಾಜರಾತಿಗೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ ಓದಲಾದ (2) ರ ದಿನಾಂಕ: 22.05.2006ರ ಷೋಕಾಸ್ ನೋಟೀಸ್‌ನೊಂದಿಗೆ ದೋಷಾರೋಪಣಾ ಪಟ್ಟಿಯನ್ನು ನೋಂದಾಯಿತ ಅಂಚೆ ಸ್ವೀಕೃತಿ ಮೂಲಕ ಜಾರಿ ಮಾಡಿ ರಕ್ಷಣಾ ಹೇಳಿಕೆ ಏನಾದರೂ ಇದ್ದಲ್ಲಿ ನೋಟೀಸ್ ತಲುಪಿದ 15 ದಿವಸದೊಳಗಾಗಿ ಲಿಖಿತ ಮೂಲಕ ಸರ್ಕಾರಕ್ಕೆ ಸಲ್ಲಿಸುವಂತೆ ಸೂಚಿಸಲಾಗಿತ್ತು. ಡಾ: ಆರ್.ವನಜಾಕ್ಷಿ, ವಿಮಾ ವೈದ್ಯಾಧಿಕಾರಿ ಇವರು ದಿನಾಂಕ: 22.06.2006 ರಂದು ಸರ್ಕಾರದಿಂದ ಹೊರಡಿಸಿದ ನೋಟೀಸಿಗೆ ಉತ್ತರವಾಗಿ ದಿನಾಂಕ:29.06.2006 ರಂದು ಸಲ್ಲಿಸಿರುವ ಮನವಿಯಲ್ಲಿ ಕೆಲವು ವೈಯಕ್ತಿಕ ಕಾರಣಗಳಿಂದ ಮತ್ತು ಅನಾರೋಗ್ಯದ ನಿಮಿತ್ತ ಕೆಲಸಕ್ಕೆ ಹಾಜರಾಗಲು ಸಾಧ್ಯವಾಗುತ್ತಿಲ್ಲವೆಂದು ತಿಳಿಸಿ ರಾಜೀನಾಮೆ ಸಲ್ಲಿಸುತ್ತಿರುವುದಾಗಿ ತಿಳಿಸುತ್ತಾ ಅದನ್ನು ಅಂಗೀಕರಿಸುವಂತೆ ಕೋರಿರುತ್ತಾರೆ ಎಂದು ನಿರ್ದೇಶಕರು, ಕಾರಾವಿ ಇವರು ಮೇಲೆ (3) ರಲ್ಲಿ ಓದಲಾದ ದಿನಾಂಕ: 21.08.2006ರ ಪತ್ರದಲ್ಲಿ ವರದಿ ಮಾಡಿರುತ್ತಾರೆ.

ಡಾ: ಆರ್. ವನಜಾಕ್ಷಿ, ವಿಮಾ ವೈದ್ಯಾಧಿಕಾರಿ, ಇವರು ದಿನಾಂಕ: 01.09.2005 ರಿಂದ ಅನಧಿಕೃತ ಗೈರು ಹಾಜರಾಗಿ 10 ತಿಂಗಳ ಬಳಿಕ ಅಂದರೆ ದಿನಾಂಕ 29.06.2006 ರಂದು ಸಲ್ಲಿಸಿರುವ ರಾಜೀನಾಮೆಯನ್ನು ಅಂಗೀಕರಿಸುವ ಬದಲು ಇವರು ನಿಗಧಿತ ಅವಧಿಯ ನಂತರವೂ ಸಹ ಇವರ ವಿರುದ್ಧ ಮಾಡಲಾದ ಆರೋಪಗಳಿಗೆ ಸಂಬಂಧಿಸಿದಂತೆ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿಲ್ಲವಾದ್ದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ, ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11ರ ಅನುಸಾರ ಇಲಾಖೆ ವಿಚಾರಣೆಯನ್ನು ನಡೆಸಲು ಶ್ರೀ ಹೆಚ್.ಪಿ. ದೇವೇಂದ್ರಯ್ಯ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮೇಲೆ ಓದಲಾದ (4) ರ ದಿನಾಂಕ: 12.10.2006ರ ಆದೇಶದಲ್ಲಿ ನೇಮಿಸಲಾಗಿತ್ತು. ಅದರಂತೆ ವಿಚಾರಣಾಧಿಕಾರಿಗಳು, ಡಾ: ಆರ್. ವನಜಾಕ್ಷಿ, ಇವರ ಅನಧಿಕೃತ ಗೈರು ಹಾಜರಾತಿಗೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆ ನಡೆಸಿ ದಿನಾಂಕ: 09.05.2007 ರಂದು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ವಿಚಾರಣಾಧಿಕಾರಿಯವರು ವಿಚಾರಣೆಯನ್ನು ನಡೆಸಿ, ಸಲ್ಲಿಸಿರುವ ವಿಚಾರಣಾ ವರದಿಯಲ್ಲಿ ಆಪಾದಿತರ ವಿರುದ್ಧ ಹೊರಿಸಿರುವ ಆರೋಪವು ರುಜುವಾತಾಗಿದೆಯೆಂದು ಅಭಿಪ್ರಾಯ ಪಟ್ಟಿರುತ್ತಾರೆ.

ಡಾ: ಆರ್. ವನಜಾಕ್ಷಿ, ವಿಮಾ ವೈದ್ಯಾಧಿಕಾರಿ ಇವರು ಸರ್ಕಾರದಿಂದ ಜಾರಿಯಾದ 2ನೇ ಷೋಕಾಸ್ ನೋಟೀಸಿಗೆ ದಿನಾಂಕ: 07.08.07 ರ ಪತ್ರದಲ್ಲಿ ತಾನು ದಿನಾಂಕ: 30.06.2006 ರಂದು ರಾಜೀನಾಮೆ ಪತ್ರ ಸಲ್ಲಿಸಿರುವುದಾಗಿಯೂ, ಸರ್ಕಾರಿ ಹುದ್ದೆಯಲ್ಲಿ ಮುಂದುವರೆಯಲು ಆಸಕ್ತಿಯಿಲ್ಲವಾದ ಕಾರಣ ರಾಜೀನಾಮೆಯನ್ನು ಅಂಗೀಕರಿಸುವಂತೆಯೂ ತಿಳಿಸಿದ್ದಾರೆಂದು, ಇವರ ಮೇಲಿನ ಆರೋಪಗಳು ಸಾಬೀತಾಗಿರುವ ಹಿನ್ನೆಲೆಯಲ್ಲಿ ದಂಡನೆಯನ್ನು ವಿಧಿಸುವ ಅಥವಾ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ ಶಿಸ್ತು ಪ್ರಾಧಿಕಾರಿಯಾದ ಸರ್ಕಾರವು ಅಗತ್ಯ ತೀರ್ಮಾನ ಕೈಗೊಳ್ಳುವಂತೆ ನಿರ್ದೇಶಕರು, ಇವರ ಮೇಲೆ ಓದಲಾದ (7)ರ ದಿನಾಂಕ 27.08.2007ರ ಪತ್ರದಲ್ಲಿ ಕೋರಿರುತ್ತಾರೆ.

ಈ ವೈದ್ಯಾಧಿಕಾರಿಯವರು ದಿನಾಂಕ 01.09.2005 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿ 10 ತಿಂಗಳ ಬಳಿಕೆ ದಿನಾಂಕ 29.06.2006 ರಂದು ರಾಜೀನಾಮೆಯನ್ನು ಸಲ್ಲಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಇವರ ರಾಜೀನಾಮೆಯನ್ನು ಅಂಗೀಕರಿಸುವ ಬದಲು ಇಲಾಖಾ ವಿಚಾರಣೆಯ ವರದಿಯನ್ನು ಆಧರಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ, ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8 (viii) ರ ಅನ್ವಯ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 117 ಎಲ್‌ಎಸ್‌ಐ 2006, ಬೆಂಗಳೂರು, ದಿನಾಂಕ: 24ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಡಾ: ಆರ್. ವನಜಾಕ್ಷಿ, ವಿಮಾ ವೈದ್ಯಾಧಿಕಾರಿ, ಇವರು ಕಾರ್ಮಿಕ ರಾಜ್ಯ ವಿಮಾ ಚಿಕಿತ್ಸಾಲಯ, ದಾಸರಹಳ್ಳಿ, ಇಲ್ಲಿ ಸೇವೆ ಸಲ್ಲಿಸುತ್ತಿದ್ದಾಗ ದಿನಾಂಕ: 01.09.2005 ರಿಂದ ಕರ್ತವ್ಯದಿಂದ ಅನಧಿಕೃತವಾಗಿ ಗೈರು ಹಾಜರಾಗಿರುವ ಆರೋಪವು ಇಲಾಖಾ ವಿಚಾರಣೆಯಿಂದ ಸಾಬೀತಾಗಿರುವುದರಿಂದ ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ, ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ 8 (viii) ರ ಅನುಸಾರ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲಾಗಿದೆ. ಹಾಗೂ ತಕ್ಷಣದಿಂದ ಜಾರಿಗೆ ಬರುವಂತೆ ಇವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1924

**ಗೋವಿಂದಸ್ವಾಮಿ**

ಪೀಠಾಧಿಕಾರಿ, ಕಾರ್ಮಿಕ ಇಲಾಖೆ (ಕಾರಾವಿ ಯೋ (ವೈ) ಸೇವೆಗಳು)

## ಸಿಬ್ಬಂದಿ ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಸಚಿವರುಗಳ ಕಚೇರಿಗಳಿಗೆ ಅಳವಡಿಸಲು ಹೊಸ ಫ್ಯಾಕ್ಸ್ ಯಂತ್ರಗಳನ್ನು ಖರೀದಿಸುವ ವೆಚ್ಚ ಪಾವತಿ ಮಾಡುವ ಬಗ್ಗೆ.

**ಓದಲಾಗಿದೆ:**
1. ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವರ ವಿಶೇಷ ಕರ್ತವ್ಯಾಧಿಕಾರಿಗಳ ಟಿಪ್ಪಣಿ ಸಂಖ್ಯೆ : ಆನಾಸಸ/ಫ್ಯಾಕ್ಸ್/2009–10, ದಿನಾಂಕ 25.05.2009.
2. ಪಶುಸಂಗೋಪನಾ ಸಚಿವರ ಆಪ್ತ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ:ಪಸಂಸ/ಆಕಾ/235/2009 ದಿನಾಂಕ: 02.05.2009.
3. ವಸತಿ ಮತ್ತು ಮುಜರಾಯಿ ಸಚಿವರ ಟಿಪ್ಪಣಿ ಸಂಖ್ಯೆ:ವಮುಸ/ಅಕಾ/5/2009 ದಿನಾಂಕ:03.07.2009.
4. ಸರ್ಕಾರದ ಜಂಟಿ ಕಾರ್ಯದರ್ಶಿ, ಸಿ.ಆ.ಸು.ಇ (ಶಿಷ್ಟಾಚಾರ) ಇವರ ಟಿಪ್ಪಣಿ ಸಂಖ್ಯೆ: ಸಿಆಸುಇ 36 (ಜಕಾ(ಶಿ) 2009, ದಿನಾಂಕ: 10.06.2009.
5. ಸರ್ಕಾರದ ಪತ್ರ ಸಂಖ್ಯೆ: ಸಿಆಸುಇ 261 ಡಿಟಿಎನ್ 2009 ದಿನಾಂಕ: 20.06.2009.
6. ಸರ್ಕಾರದ ಪತ್ರ ಸಂ. ಸಿಆಸುಇ 261 ಡಿಟಿಎನ್ 2009 ದಿನಾಂಕ : 21.07.2009.
7. ಮೆ: ಅಭಿಷೇಕ್ ಬಿಸಿನೆಸ್ ಸೆಲ್ಯೂಷನ್ ಸಂಸ್ಥೆಯ ಬಿಲ್ ಸಂಖ್ಯೆ: 185 ದಿ: 23.07.2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಿಂದ (4) ರಲ್ಲಿನ ಟಿಪ್ಪಣಿಗಳಲ್ಲಿ ಮಾನ್ಯ ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವರು, ಮಾನ್ಯ ಪಶುಸಂಗೋಪನಾ ಸಚಿವರು, ಮಾನ್ಯ ವಸತಿ ಮತ್ತು ಮುಜರಾಯಿ ಸಚಿವರು, ಹಾಗೂ ಸರ್ಕಾರದ ಜಂಟಿ ಕಾರ್ಯದರ್ಶಿ, ಸಿ.ಆ.ಸು.ಇ (ಶಿಷ್ಟಾಚಾರ) ಇವರುಗಳ ಕಚೇರಿಗಳಿಗೆ ಹೊಸ ಫ್ಯಾಕ್ಸ್ ಯಂತ್ರಗಳನ್ನು ಖರೀದಿಸಿ ಅಳವಡಿಸುವಂತೆ ಸಂಬಂಧಪಟ್ಟ ಅಧಿಕಾರಿಗಳು ಕೋರಿಕೆ ಸಲ್ಲಿಸಿದ್ದರು. ಮಾನ್ಯ ಸಚಿವರುಗಳು ಹಾಗೂ ಸರ್ಕಾರದ ಜಂಟಿ ಕಾರ್ಯದರ್ಶಿ, ಸಿ.ಆ.ಸು.ಇ. (ರಾಜ್ಯ ಶಿಷ್ಟಾಚಾರ), ಇವರುಗಳ ಕಚೇರಿಗಳಿಗೆ ಅಳವಡಿಸಲು ಹೊಸ ಪ್ಯಾನಾಸೋನಿಕ್ ಕೆಎಕ್ಸ್ ಎಫ್‌ಟಿ–983 ಮಾದರಿಯ ನಾಲ್ಕು ಫ್ಯಾಕ್ಸ್ ಯಂತ್ರಗಳನ್ನು ಖರೀದಿಸುವ ಸಂಬಂಧ ಮೇಲೆ ಓದಲಾದ ಕ್ರಮ ಸಂಖ್ಯೆ (5) ರಲ್ಲಿನ ಪತ್ರದಲ್ಲಿ ಆರು ಸಂಸ್ಥೆಗಳಿಂದ ದರ ಪಟ್ಟಿಯನ್ನು ಕರೆಯಲಾಗಿತ್ತು. ಈ ಸಂಬಂಧ ಆರು ಸಂಸ್ಥೆಗಳು ದರಪಟ್ಟಿ ಸಲ್ಲಿಸಿದ್ದು, ಅವುಗಳಲ್ಲಿ ಮೆ: ಅಭಿಷೇಕ್ ಬಿಸಿನೆಸ್ ಸೆಲ್ಯೂಷನ್, ಬೆಂಗಳೂರು ಸಂಸ್ಥೆಯು ಪ್ಯಾನಾಸೋನಿಕ್ ಕೆಎಕ್ಸ್ ಎಫ್‌ಟಿ–983 ಮಾದರಿಯ ಫ್ಯಾಕ್ಸ್ ಉಪಕರಣವೊಂದಕ್ಕೆ ಅತಿ ಕಡಿಮೆ ದರ, ಅಂದರೆ ರೂ. 9,360.00 (ತೆರಿಗೆ ಸೇರಿ) ಮೊತ್ತವನ್ನು ನಮೂದಿಸಿರುತ್ತದೆ. ಅದರಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (6) ಪತ್ರದಲ್ಲಿ ಒಟ್ಟು 04 (ನಾಲ್ಕು) ಹೊಸ ಪ್ಯಾನಾಸೋನಿಕ್ ಕೆಎಕ್ಸ್ ಎಫ್‌ಟಿ–983 ಮಾದರಿಯ ಫ್ಯಾಕ್ಸ್ ಯಂತ್ರಗಳನ್ನು ಒಟ್ಟು ರೂ. 37,440.00 (ತೆರಿಗೆ ಸೇರಿ) ವೆಚ್ಚದಲ್ಲಿ ಖರೀದಿಸಿ ಒದಗಿಸುವಂತೆ ಮೆ: ಅಭಿಷೇಕ್ ಬಿಸಿನೆಸ್ ಸೆಲ್ಯೂಷನ್ ಸಂಸ್ಥೆಯನ್ನು ಕೋರಲಾಗಿತ್ತು. ಅದರಂತೆ ಈ ಸಂಸ್ಥೆಯು ಒಟ್ಟು 04 ಫ್ಯಾಕ್ಸ್ ಯಂತ್ರಗಳನ್ನು ಖರೀದಿಸಿ ಅಳವಡಿಸಿದ್ದು, ಮೇಲೆ ಕ್ರಮ ಸಂಖ್ಯೆ (7) ರಲ್ಲಿನ ಬಿಲ್ಲನ್ನು ಪಾವತಿಗಾಗಿ ಸಲ್ಲಿಸಿದೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 261 ಡಿಟಿಎನ್ 2009, ಬೆಂಗಳೂರು, ದಿನಾಂಕ: 10ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿನ ವಿವರಣೆಯನ್ವಯ ಮಾನ್ಯ ಸಚಿವರುಗಳ ಮತ್ತು ಅಧಿಕಾರಿಯವರ ಕಚೇರಿಗಳಿಗೆ ಒಟ್ಟು 04 (ನಾಲ್ಕು) ಹೊಸ ಪ್ಯಾನಾಸೋನಿಕ್ ಕೆಎಕ್ಸ್ ಎಫ್‌ಟಿ–987 ಮಾದರಿಯ ಫ್ಯಾಕ್ಸ್ ಯಂತ್ರಗಳನ್ನು ಖರೀದಿಸಿ ಅಳವಡಿಸಿರುವ ವೆಚ್ಚ ಒಟ್ಟು ರೂ.37,440.00 (ರೂ. ಮೂವತ್ತೇಳು ಸಾವಿರ ನಾಲ್ಕು ನೂರ ನಲವತ್ತು ಮಾತ್ರ) (ತೆರಿಗೆ ಸೇರಿ) ಗಳನ್ನು ಮೆ: ಅಭಿಷೇಕ್ ಬಿಸಿನೆಸ್ ಸೆಲ್ಯೂಷನ್, ನಂ. 31/1, 2ನೇ ಅಡ್ಡರಸ್ತೆ, ಸಿ.ಕೆ.ಸಿ,. ಗಾರ್ಡನ್, ಲಾಲ್‌ಬಾಗ್ ರಸ್ತೆ, ಬೆಂಗಳೂರು, ಸಂಸ್ಥೆಗೆ ಪಾವತಿ ಮಾಡಲು ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು ಆಯವ್ಯಯ ಲೆಕ್ಕ ಶೀರ್ಷಿಕೆ "2013–ಮಂತ್ರಿ ಮಂಡಲ–800–ಇತರೆ ವೆಚ್ಚಗಳು–051–ಸಾಮಾನ್ಯ ವೆಚ್ಚಗಳು" ಇದರಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ ಎಫ್‌ಟಿ 1 ಟಿಎಫ್‌ಪಿ 1996, ದಿನಾಂಕ: 10.07.2006 ರಲ್ಲಿ ಇಲಾಖೆಯ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಮಂಜುನಾಥ್**

ಪಿ.ಆರ್. 1926

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಕೊಪ್ಪಳ ಜಿಲ್ಲೆ, ಗಂಗಾವತಿ ತಾಲ್ಲೂಕು ಚಿಕ್ಕಬೆಣಕಲ್‌ರಾಯ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಚಿಕ್ಕಬೆಣಕಲ್ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 28/05/09ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜಾ/ ಭೂಸ್ವಾಪ್ರ/2009–10/3072.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಕೊಪ್ಪಳ ಜಿಲ್ಲೆ, ಗಂಗಾವತಿ ತಾಲ್ಲೂಕು ಚಿಕ್ಕಬೆಣಕಲ್‌ರಾಯ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಚಿಕ್ಕಬೆಣಕಲ್ ಗ್ರಾಮದ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ರೂ.33,02,271–00ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 27/02/03
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 29/09/04

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಗಂಗಾವತಿ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ.

ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯು ಪತ್ರ ಸಂಖ್ಯೆ:ಆರ್‌ಡಿ 384 ಮತ್ತು 382 ಎಲ್‌ಸಿಜಿ 2009, ದಿನಾಂಕ 16/03/09ರಲ್ಲಿ ಅಭಿಪ್ರಾಯ ನೀಡಿದೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್‌ಎಸಿ ಸಂಖ್ಯೆ | ಚಿಕ್ಕಬೆಣಕಲ್ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 01/06 | 62/ಅ1 | 6–04 | 1714359 |
| 2 | 02/06 | 63/ಅ–3 | 5–26 | 1587912 |
| | **ಒಟ್ಟು** | | | **3302271** |

- **ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 91 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ: 10ನೇ ಆಗಸ್ಟ್ 2009.**

ಕೊಪ್ಪಳ ಜಿಲ್ಲೆ, ಗಂಗಾವತಿ ತಾಲ್ಲೂಕು ಚಿಕ್ಕಬೆಣಕಲ್‌ರಾಯ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಚಿಕ್ಕಬೆಣಕಲ್ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್

ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.33,02,271–00ಗಳನ್ನು ಮೂವತ್ಮೂರು ಲಕ್ಷದ ಎರಡು ಸಾವಿರದ ಇನ್ನೂರ ಎಪ್ಪತ್ತೊಂದು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1932

**ಕೆ.ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಡಿ.ಬಿ. ನಾಯಕ್, ಕೆ.ಎ.ಎಸ್, (ಸೂಪರ್ ಟೈಂ ಸ್ಕೇಲ್) ಅಧಿಕಾರಿ, ಹಿಂದಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ಬೆಳಗಾಂ, ಇವರಿಗೆ ಜೀವನಾಧಾರ ಭತ್ಯೆ ಪಾವತಿಯ ಆದೇಶ ತಿದ್ದುಪಡಿ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂ: ಸಿಆಸುಇ 68 ಕೆಇವಿ 08 ದಿ: 28.10.2008.
2. ಸರ್ಕಾರಿ ಆದೇಶ ಸಂ: ಸಿಆಸುಇ 6 ಕೆಇವಿ 09 ದಿ: 26.05.2009.
3. ಅಧಿಕಾರಿಯ ಮನವಿ ದಿ: 31.07.2009.

**ಪ್ರಸ್ತಾವನೆ:**

ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಶಿಫಾರಸ್ಸಿನ ಅನ್ವಯ ಬಲ್ಲ ಮೂಲಗಳಿಂದ ಅಧಿಕ ಆಸ್ತಿಯನ್ನು ಹೊಂದಿರುವ ಕುರಿತು ಲೋಕಾಯುಕ್ತ ದಾಳಿ ಪ್ರಕರಣದಲ್ಲಿ ಸಿಲುಕಿದ್ದ ಶ್ರೀ ಡಿ.ಬಿ. ನಾಯಕ್, ಕೆ.ಎ.ಎಸ್., (ಸೂಪರ್ ಟೈಂ ಸ್ಕೇಲ್) ಅಧಿಕಾರಿ ಇವರನ್ನು ಮೇಲೆ ಓದಲಾದ ಕ್ರಮ ಸಂ. (1) ರ ಆದೇಶದಲ್ಲಿ ಸೇವೆಯಿಂದ ಅಮಾನತ್ತುಗೊಳಿಸಿ ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿ ರವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 98ರ ನಿಯಮದನ್ವಯ ಜೀವನಾಧಾರದ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ ಎಂದು ಆದೇಶಿಸಲಾಗಿದೆ. ಮೇಲೆ ಓದಲಾದ ಕ್ರಮ ಸಂ. (2)ರ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ, ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 98ರ ಪ್ರಕಾರ ಇವರ ಅಮಾನತ್ತಿನ ಆದೇಶ ದಿ: 28.10.2008 ರಿಂದ ಈ ಬಗ್ಗೆ ಮುಂದಿನ ಆದೇಶ ಹೊರಡಿಸುವವರೆಗೆ ನಿಯಮಾನುಸಾರ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ ಎಂದು ಆದೇಶಿಸಲಾಗಿದೆ. ಮೇಲೆ ಓದಲಾದ ಕ್ರಮ ಸಂ (3) ರ ಮನವಿಯಲ್ಲಿ ಸದರಿ ಅಧಿಕಾರಿಗಳು ತಮ್ಮನ್ನು ದಿ: 19.09.08 ರಿಂದಲೇ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತುಗೊಳಿಸಿದ್ದರೂ ದಿ: 28.10.2008 ರಿಂದ ಜೀವನಾಧಾರ ಭತ್ಯೆ ಮಂಜೂರಾತಿ ನೀಡಿ ಆದೇಶಿಸಲಾಗಿದೆಯೆಂದು ಇದರಿಂದ ಮಹಾಲೇಖಪಾಲರು Authorization ನಲ್ಲಿ ದಿ: 28.10.2008 ರಿಂದ ಪಡೆಯಲು ಆದೇಶ ನೀಡಿರುತ್ತಾರೆ ಎಂದು ತಿಳಿಸುತ್ತಾ ದಿ: 19.09.08 ರಿಂದ ಜಾರಿಗೆ ಬರುವಂತೆ ಜೀವನಾಧಾರ ಭತ್ಯೆಯನ್ನು ಪಡೆಯಲು ಅನುಕೂಲವಾಗುವಂತೆ ತಿದ್ದುಪಡಿ ಆದೇಶವನ್ನು ಹೊರಡಿಸುವಂತೆ ಕೋರಿದ್ದಾರೆ. ಅದರಂತೆ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂ. ಸಿಆಸುಇ 06 ಕೆಇವಿ 2009, ಬೆಂಗಳೂರು, ದಿನಾಂಕ: 5ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಸರ್ಕಾರಿ ಆದೇಶ ಸಂ. ಸಿಆಸುಇ 6 ಕೆಇವಿ 2009 ದಿ: 26.05.2009ರ ಆದೇಶದಲ್ಲಿನ ಆದೇಶ ಭಾಗದಲ್ಲಿ ದಿ: 28.10.2008 ರಿಂದ ಎಂದಿರುವುದನ್ನು ದಿ: 19.092008 ರಿಂದ ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್. ನಾಗೇಂದ್ರ**

ಪಿ.ಆರ್. 1945

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**HORTICULTURE SECRETARIAT**

**Sub:** "Scheme for Integrated Farming in Coconut for Productivity/ Improvement with Coconut Development Board Assistance (100% CDB)" – Release of funds reg.

**Read:**
1) Government Order No. AHD 53 HPP 2009, dated 24.06.2009.
2) Government Order No.AHD 161 HPP 2008 dated 07.07.2009.
3) Letter of CDB F.No.00102(31)/TMOC-MKG-2009 dated 17.07.2009.
4) Letter of CDB F.No.272/2007 –DEV(Kar) dated 20.07.2009.
5) Government Order No.AHD 53 HPP 2009 dated 28.07.2009.
6) Director of Horticulture Letter No.ತೋಇ/ತೋಬೆ/ಸತೋಅ2/1/2009-10/982 dated:31.07.2009.

**Preamble:**

1. During the year 2009-10, State Level Administrative Approval for implementing the Coconut Development Board Programmes with a total financial outlay of Rs.632.294 lakhs vide Government Order read at (1) above. Under these programmes components to the tune of Rs.303.03 lakhs will be implemented by the Department of Horticulture and components to the tune of Rs.329.264 lakhs will be implemented by the Coconut Development Board directly. An amount of Rs.178.34 lakhs has been released to the Director of Horticulture vide Government Orders read at (2) and (5) above.

2. Coconut Development Board has revalidated Rs.32.33 lakhs vide its letters read at (3) and (4) above to be utilized during 2009-10.

| Sl. No | Schemes | Amount (Rs.in lakhs) |
|---|---|---|
| 1 | The project establishment of demonstration-cum-training center for coconut products-Revalidation of fund | 27.33 |
| 2 | Modernization of coconut processing by introduction of Modern Copra Dryer | 5.00 |
| | **TOTAL** | **32.33** |

3. Accordingly, the Director of Horticulture has requested the Government vide his letter read at (6) above to release Rs.32.33 lakhs under the Head of Account 2401-00-108-2-35-100 (Financial Assistance/ Relief) for implementation of the spill over works as revalidated by Coconut Development Board.

4. This has been examined and it is ordered as below;

**Government Order No.AHD 53 HPP 2009, Bangalore, Dated: 17th August 2009**

Government is pleased to release an amount of Rs.32.33/- (Rupees Thirty Two Lakhs Thirty Three Thousand only) to the Director of Horticulture under the "Scheme for Integrated Farming in Coconut for Productivity/ Improvement" in the State during 2009-10 under the Head of Account 2401-00-108-2-35-100 (Financial Assistance/ Relief).

2. This shall be utilized for the purpose as mentioned in the preamble above and as per the guidelines of Coconut Development Board.

3. This order is issued as per the delegation of powers vested with Secretaries vide Government Order No.FD 1 TFP 2008 dated 16.5.2008 and concurrence by the Internal Financial Advisor, Agriculture and Horticulture Department vide Note No.ಕೃತೋಇ 168 ಆಂಆಸ 2009 dated 11.08.2009.

By order and in the name of Governor of Karnataka

**S. RAJU**

Under Secretary to Government, Horticulture Department.

P.R. 1958

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಆಯುಷ್ ಪದ್ಧತಿಗಳನ್ನು ಮುಖ್ಯವಾಹಿನಿಗೆ ತರುವ ಬಗ್ಗೆ – ಜಿಲ್ಲಾ ಆಯುಷ್ ಅಧಿಕಾರಿಗಳ ಸ್ವತಂತ್ರ ಕಾರ್ಯ ನಿರ್ವಹಣೆ.

**ಓದಲಾಗಿದೆ:** (1) ಸರ್ಕಾರದ ಆದೇಶ ಸಂಖ್ಯೆ:ಆಕುಕ 199 ಪಿಐಎಂ 2009, ದಿನಾಂಕ:23–05–2009.

(2) ನಿರ್ದೇಶಕರು, ಆಯುಷ್ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ:ಆಯುಷ್/12/ ಐಇಸಿ(3)/2008–09, ದಿನಾಂಕ: 23–07–2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ. (1) ರ ಸರ್ಕಾರದ ಆದೇಶದಲ್ಲಿ, ಆಯುಷ್ ಇಲಾಖೆಯ ಎಲ್ಲಾ ಜಿಲ್ಲಾ ಆಯುಷ್ ಅಧಿಕಾರಿಗಳು ಆಯಾ ಜಿಲ್ಲೆಗೆ ಸಂಬಂಧಿಸಿದಂತೆ ಇಲಾಖಾ ಕಾರ್ಯಕ್ರಮ ಅಧಿಕಾರಿಗಳಾಗಿ ಮತ್ತು ಅವರುಗಳು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳೊಂದಿಗೆ ಸಮನ್ವಯಿಸಿ, ಅವರ ಅಧೀನದಲ್ಲಿ ಕರ್ತವ್ಯ ನಿರ್ವಹಿಸುವುದು ಹಾಗೂ ಆಯುಷ್ ಕಾರ್ಯಕ್ರಮಗಳಿಗೆ ಸಂಬಂಧಿಸಿದಂತೆ ಎಲ್ಲಾ ಪತ್ರ ವ್ಯವಹಾರಗಳನ್ನು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಮುಖಾಂತರ ಮತ್ತು ಅವರ ಶಿಫಾರಸ್ಸಿನೊಂದಿಗೆ ಸಲ್ಲಿಸುವುದು. ಹಾಗೂ ಜಿಲ್ಲಾ ಆಯುಷ್ ಅಧಿಕಾರಿಗಳ ರಜಾ ಮಂಜೂರಾತಿ ಮಾಡಲು ಮತ್ತು ಜಿಲ್ಲಾ ಆಯುಷ್ ಅಧಿಕಾರಿಗಳ ಅನುಪಸ್ಥಿತಿಯಲ್ಲಿ ಸೂಕ್ತ ಬದಲಿ ವ್ಯವಸ್ಥೆಯನ್ನು ಮಾಡಲು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳಿಗೆ ಅಧಿಕಾರವನ್ನು ನೀಡಿ ಆದೇಶಿಸಿತ್ತು.

ಮೇಲೆ ಓದಲಾದ ಕ್ರ.ಸಂ. (2) ರ ಪತ್ರದಲ್ಲಿ, ನಿರ್ದೇಶಕರು, ಆಯುಷ್ ನಿರ್ದೇಶನಾಲಯ ಇವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿ, ಭಾರತ ಸರ್ಕಾರವು ಆಯುಷ್ ಇಲಾಖೆಯನ್ನು ಮುಖ್ಯವಾಹಿನಿಯಲ್ಲಿ ತರುವ ದೃಷ್ಟಿಯಿಂದ ಹಲವಾರು ಸುಧಾರಣೆಗಳನ್ನು ತಂದಿರುತ್ತದೆ. ಇದರ ಪ್ರಕಾರ ಆಯುಷ್ ಪದ್ಧತಿಗಳನ್ನು ಅಭಿವೃದ್ಧಿಪಡಿಸಬೇಕೆಂದು ಸಹ ತಿಳಿಸಿದೆ. ಇದರರ್ಥ ಆಯುಷ್ ಇಲಾಖೆಯು ಸ್ವತಂತ್ರವಾಗಿ ಬೆಳೆದು ಅಭಿವೃದ್ಧಿ ಆಗಬೇಕೆಂದಾಗಿರುತ್ತದೆ. ಆದರೆ, ಸರ್ಕಾರದ ಆದೇಶ ಸಂಖ್ಯೆ:ಆಕುಕ 199 ಪಿಐಎಂ 2009, ದಿನಾಂಕ:23–05–2009 ರಿಂದ ಜಿಲ್ಲಾ ಆಯುಷ್ ಅಧಿಕಾರಿಗಳು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳಲ್ಲಿ ವರದಿ ಮಾಡಿಕೊಂಡು, ಆಯುಷ್ ಕಾರ್ಯಕ್ರಮಗಳಿಗೆ ಸಂಬಂಧಿಸಿದ ಎಲ್ಲಾ ಪ್ರಕರಣಗಳಲ್ಲಿ ಅವರಿಂದ ಆದೇಶ ಪಡೆಯುವುದರಿಂದ, ಎಲ್ಲಾ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳೂ ಕೂಡ ಆಯುಷ್ ನಿರ್ದೇಶಕರ ನಿಯಂತ್ರಣದಲ್ಲಿ ಕೆಲಸ ನಿರ್ವಹಿಸಲು ಕ್ರಮ ವಹಿಸಬೇಕಾಗುತ್ತದೆ. ಇದಲ್ಲದೇ, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳಿಗೆ ಆಯುಷ್ ವೈದ್ಯ ಪದ್ಧತಿಗಳ ಬಗ್ಗೆ ಸೂಕ್ತ ಮಾಹಿತಿ ಹಾಗೂ ಅನುಭವ ಇರುವುದಿಲ್ಲ. ಯಾವುದೇ ಇಲಾಖೆಯು ಅಭಿವೃದ್ಧಿ ಆಗಬೇಕಾದಲ್ಲಿ ಆ ಇಲಾಖೆಯು ಸ್ವತಂತ್ರವಾಗಿ ಕರ್ತವ್ಯ ನಿರ್ವಹಿಸುವುದು ಪ್ರಮುಖವಾಗಿರುತ್ತದೆಂದು ಹಾಗೂ ದಿನಾಂಕ:27–06–2009 ರಂದು ಆಯುಷ್ ನಿರ್ದೇಶನಾಲಯದಲ್ಲಿ ನಡೆದ ಜಿಲ್ಲಾ ಆಯುಷ್ ಅಧಿಕಾರಿಗಳ ಸಭೆಯಲ್ಲಿ ಜಿಲ್ಲಾ ಆಯುಷ್ ಅಧಿಕಾರಿಗಳು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿ ಬಹುತೇಕ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ಆಯುಷ್ ಬಗ್ಗೆ ಹೆಚ್ಚಿನ ಮಹತ್ವ ನೀಡದೇ, ಇನ್ನಿತರೆ ಕೆಲಸ ಮಾಡಲು ಸೂಚಿಸುವುದರಿಂದ ಆಯುಷ್ ಕಾರ್ಯಕ್ರಮಗಳನ್ನು ನಿಗದಿತ ವೇಳೆಯಲ್ಲಿ ಸರಿಯಾಗಿ ಅನುಷ್ಠಾನಗೊಳಿಸಲು ಸಾಧ್ಯವಾಗುವುದಿಲ್ಲವೆಂದು ತಿಳಿಸಿರುತ್ತಾರೆಂದು, ಇದಲ್ಲದೇ ಆಯುಷ್ ಇಲಾಖೆಯು ಸ್ವತಂತ್ರವಾಗಿ ಕಾರ್ಯ ನಿರ್ವಹಿಸಲು ಕ್ರಮ ಕೈಗೊಳ್ಳಲು ವಿವಿಧ ಸಂಘ–ಸಂಸ್ಥೆಗಳು ಒತ್ತಾಯಿಸಿರುತ್ತಾರೆಂದು ತಿಳಿಸುತ್ತಾ, ಮೇಲೆ ಓದಲಾದ ಕ್ರ.ಸಂ. (1) ರಲ್ಲಿನ ಸರ್ಕಾರದ ಆದೇಶಕ್ಕೆ ಈ ಕೆಳಕಂಡಂತೆ ಸೂಕ್ತ ತಿದ್ದುಪಡಿಯನ್ನು ತರುವಂತೆ ಸರ್ಕಾರವನ್ನು ಕೋರಿರುತ್ತಾರೆ.

1. ಜಿಲ್ಲಾ ಆಯುಷ್ ಅಧಿಕಾರಿಗಳು ಆಯಾ ಜಿಲ್ಲೆಗಳಲ್ಲಿ ಸ್ವತಂತ್ರವಾಗಿ ಕರ್ತವ್ಯ ನಿರ್ವಹಿಸುವುದು.
2. ಇವರುಗಳ ರಜೆ ಮಂಜೂರಾತಿ, ಸೂಕ್ತ ಬದಲಿ ವ್ಯವಸ್ಥೆ ಹಾಗೂ ಪತ್ರ ವ್ಯವಹಾರಗಳನ್ನು ಆಯುಷ್ ಇಲಾಖಾ ನಿರ್ದೇಶಕರ ಜೊತೆ ಮಾಡುವುದು.
3. ಎನ್.ಆರ್.ಹೆಚ್.ಎಂ. ಕಾರ್ಯಕ್ರಮಗಳಿಗೆ ಸೀಮಿತವಾಗುವಂತೆ ಮಾತ್ರ ಜಿಲ್ಲಾ ಆಯುಷ್ ಅಧಿಕಾರಿಗಳು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳೊಂದಿಗೆ ಸಮನ್ವಯಿಸಿ ಕರ್ತವ್ಯ ನಿರ್ವಹಿಸುವುದು.

ನಿರ್ದೇಶಕರ ಪ್ರಸ್ತಾವನೆಯ ಹಿನ್ನೆಲೆಯಲ್ಲಿ, ಸರ್ಕಾರದ ಆದೇಶ ಸಂಖ್ಯೆ:ಆಕುಕ 199 ಪಿಐಎಂ 2009, ದಿನಾಂಕ:23.05.2009 ನ್ನು ಹಿಂಪಡೆದು, ನಿರ್ದೇಶಕರು ಮಾಡಿರುವ ಶಿಫಾರಸ್ಸುಗಳಂತೆ ಆಯುಷ್ ಇಲಾಖೆಯ ಅಭಿವೃದ್ಧಿಯ ದೃಷ್ಟಿಯಿಂದ ಜಿಲ್ಲಾ ಆಯುಷ್ ಅಧಿಕಾರಿಗಳು ಸ್ವತಂತ್ರವಾಗಿ ಕಾರ್ಯ ನಿರ್ವಹಿಸುವುದು ಸೂಕ್ತವೆಂದು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆಕುಕ 199 ಪಿಐಎಂ 2009, ಬೆಂಗಳೂರು, ದಿನಾಂಕ: 17ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರದ ಆದೇಶ ಸಂಖ್ಯೆ:ಆಕುಕ 199 ಪಿಐಎಂ 2009, ದಿನಾಂಕ:23–05–2009 ನ್ನು ಈ ಕೂಡಲೇ ಜಾರಿಗೆ ಬರುವಂತೆ ಹಿಂಪಡೆಯಲಾಗಿದೆ. ಹಾಗೂ ಆಯುಷ್ ಇಲಾಖೆಯ

ಅಭಿವೃದ್ಧಿ ಮತ್ತು ಸುಲಲಿತ ಹಾಗೂ ಪರಿಣಾಮಕಾರಿ ಕಾರ್ಯ ನಿರ್ವಹಣೆ ದೃಷ್ಟಿಯಿಂದ ಜಿಲ್ಲಾ ಆಯುಷ್ ಅಧಿಕಾರಿಗಳು ಸ್ವತಂತ್ರವಾಗಿ ಈ ಕೆಳಕಂಡಂತೆ ಕಾರ್ಯ ನಿರ್ವಹಿಸಲು ಆದೇಶಿಸಿದೆ.

1. ಜಿಲ್ಲಾ ಆಯುಷ್ ಅಧಿಕಾರಿಗಳು ಆಯಾ ಜಿಲ್ಲೆಗಳಲ್ಲಿ ಸ್ವತಂತ್ರವಾಗಿ ಕರ್ತವ್ಯ ನಿರ್ವಹಿಸುವುದು.
2. ಇವರುಗಳ ರಜೆ ಮಂಜೂರಾತಿ, ಸೂಕ್ತ ಬದಲಿ ವ್ಯವಸ್ಥೆ ಹಾಗೂ ಪತ್ರ ವ್ಯವಹಾರಗಳನ್ನು ಆಯುಷ್ ಇಲಾಖಾ ನಿರ್ದೇಶಕರ ಜೊತೆ ಮಾಡುವುದು.
3. ಎನ್.ಆರ್.ಹೆಚ್.ಎಂ. ಕಾರ್ಯಕ್ರಮಗಳಿಗೆ ಸೀಮಿತವಾಗುವಂತೆ ಮಾತ್ರ ಜಿಲ್ಲಾ ಆಯುಷ್ ಅಧಿಕಾರಿಗಳು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳೊಂದಿಗೆ ಸಮನ್ವಯಾಧಿಕಾರಿಗಳಾಗಿ ಕರ್ತವ್ಯ ನಿರ್ವಹಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಹಾಲಕ್ಷ್ಮಮ್ಮ**

ಪಿ.ಆರ್. 1959 ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾರತೀಯ ವೈದ್ಯ ಪದ್ಧತಿ)

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಆರ್.ಕೆ. ಕುಂಬಾರಗೋಳ, ಮಾಜಿ ಸಿ.ಪಿ.ಸಿ.–1184, ದೊಡ್ಡವಾಡ ಪೊಲೀಸ್ ಠಾಣೆ, ಬೆಳಗಾವಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬೆಳಗಾವಿ, ಇವರ ಆದೇಶ ಸಂಖ್ಯೆ: ಸಿಬ್ಬಂದಿ–2/ಇವಿ/09/2007 [ಅ.ಪು.ಸಂ:87/08] ದಿ:18–01–2008
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ:ಅಪೀಲ/21/ಉವ/2008 ದಿ:26–06–08
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:28–08–2008
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)72/2008–09 ದಿ:04–02–2008
5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ 29 ಸಿಎನ್‌ಎಸ್ 2009 ದಿನಾಂಕ:16.06.2009

**ಪ್ರಸ್ತಾವನೆ:**

ಶ್ರೀ ಆರ್.ಕೆ. ಕುಂಬಾರಗೋಳ, ಇವರು ದೊಡ್ಡವಾಡ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾದ ಆರೋಪದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷರೋಪಣೆ:**

"ಆಪಾದಿತ ಪೊಲೀಸ್ ಅಧಿಕಾರಿ ಸಿ.ಪಿ.ಸಿ.–1184, ಶ್ರೀ.ಆರ್.ಕೆ. ಕುಂಬಾರಗೋಳ, ದೊಡ್ಡವಾಡ ಪೊಲೀಸ್ ಠಾಣೆ, ರವರಾದ ನೀವು ದಿ:28–03–2005 ರಿಂದ 31–03–2005ರ ಮೇರೆಗೆ ನಾಲ್ಕು ದಿವಸ ಸಾಂದರ್ಭಿಕ ರಜೆಯನ್ನು ಪಡೆದುಕೊಂಡು ಹೋಗಿ ದಿ:01–04–05 ರಂದು ಮರಳಿ ಕರ್ತವ್ಯಕ್ಕೆ ಹಾಜರಾಗಬೇಕಾಗಿತ್ತು. ಆದರೆ ದಿ:01–04–2005 ರಂದು ಕರ್ತವ್ಯಕ್ಕೆ ಹಾಜರಾಗದೇ ಕಾಯಿಲೆ ಇದ್ದ ಬಗ್ಗೆ ತಂತಿ ಸಂದೇಶ ಕಳುಹಿಸಿ ನಂತರ ವೈದ್ಯಕೀಯ ಉಪಚಾರ ಕುರಿತು ಎಂ.ಎಚ್.ಎಸ್.ನ್ನು ಪಡೆಯಲು ಠಾಣೆಗೆ ಬಾರದೇ ಹಾಗೂ ವೈದ್ಯಕೀಯ ಉಪಚಾರ ಪಡೆಯುತ್ತಿದ್ದ ಬಗ್ಗೆ ಕಾಲಕಾಲಕ್ಕೆ ಮಾಹಿತಿಯನ್ನು ನಿಮ್ಮ ಮೇಲಾಧಿಕಾರಿಗಳಿಗೆ ತಿಳಿಸದೇ ಇದ್ದಾಗ ಪಿ.ಎಸ್.ಐ. ದೊಡ್ಡವಾಡ, ಇವರು ಜಿಲ್ಲಾ ಪೊಲೀಸ್ ಆಸ್ಪತ್ರೆ ಬೆಳಗಾವಿ, ರವರಿಗೆ ಪತ್ರ ಬರೆದು ಕೇಳಲಾಗಿ ನೀವು ದಿನಾಂಕ: 01–04–05 ರಂದು ಹೊರರೋಗಿ ಅಂತಾ ದಾಖಲಾಗಿ ಉಪಚಾರ ಹೊಂದಿದ ಬಗ್ಗೆ ಪತ್ರದಲ್ಲಿ ತಿಳಿಸಿರುತ್ತಾರೆ. ನಿಮಗೆ ನಿಜವಾಗಿ ದೀರ್ಘಾವಧಿಯವರೆಗೆ ಕಾಯಿಲೆ ಆಗಿ ಉಪಚಾರ ಪಡೆಯದೇ ದಿ:28–03–2005 ರಿಂದ ದಿ:02–04–2006ರ ವರೆಗೆ ಕರ್ತವ್ಯಕ್ಕೆ ಅನಧೀಕೃತವಾಗಿ ಗೈರು ಹಾಜರ ಉಳಿದು ನಿಮ್ಮ ಕರ್ತವ್ಯದಲ್ಲಿ ಘೋರ ವಿಮುಖತೆ ಹಾಗೂ ದುರ್ನಡತೆಯನ್ನು ಪ್ರದರ್ಶಿಸಿರುವಿರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ: 18–01–08ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಿ ಆದೇಶಿಸಿದ್ದಾರೆ ಹಾಗೂ ದಿ:28–03–2005 ರಿಂದ ದಿ:02–04–2006ರ ವರೆಗಿನ ಅನಧಿಕೃತ ಗೈರುಹಾಜರಾದ ಅವಧಿಯನ್ನು ವೇತನರಹಿತ ರಜೆಯೆಂದು ಪರಿಗಣಿಸಿದ್ದಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ:26.06.08ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರ ವಿರುದ್ಧದ ಆರೋಪವು ಸಾಬೀತಾಗಿದೆ. ಅರ್ಜಿದರರು ಸರ್ಕಾರದಲ್ಲಿ ಸಲ್ಲಿಸಿದ ಸೇವೆಯನ್ನು ಗಮನದಲ್ಲಿಟ್ಟುಕೊಂಡು ಶಿಸ್ತುಪ್ರಾಧಿಕಾರದ ದಂಡನಾದೇಶವನ್ನು ಭಾಗಶ: ಮಾರ್ಪಡಿಸಲು ಸರ್ಕಾರವು ತೀರ್ಮಾನಿಸಿ ಈ ಕುರಿತು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಓದಲಾದ (5)ರ ಪತ್ರದಲ್ಲಿ ಪಡೆದು, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 300 ಪೊಸಿಅ 2008 ಬೆಂಗಳೂರು, ದಿನಾಂಕ: 6ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಆರ್.ಕೆ. ಕುಂಬಾರಗೋಳ, ಮಾಜಿ ಪಿ.ಸಿ., ಇವರನ್ನು ಸೇವೆಯಿಂದ ಕಡ್ಡಾಯನಿವೃತ್ತಿಗೊಳಿಸಿ ಆದೇಶಿಸಿ, ದಿ:28–03–05 ರಿಂದ 02–04–06ರ ವರೆಗೆ ಅನಧಿಕೃತವಾಗಿ ಗೈರು ಹಾಜರಾದ ಅವಧಿಯನ್ನು ವೇತನರಹಿತ ರಜೆಯೆಂದು ಪರಿಗಣಿಸಲಾಗಿದೆ. ಈ ಆದೇಶವು ಶಿಸ್ತುಪ್ರಾಧಿಕಾರವು ಹೊರಡಿಸಿದ ಆದೇಶದ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1802

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಸ್ವಾಮಿದೊರೆ, ಮಾಜಿ ಸಿ.ಎಚ್.ಸಿ., ನಂಜನಗೂಡು ಪೊಲೀಸ್ ಠಾಣೆ, ಮೈಸೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮೈಸೂರು, ಇವರ ಆದೇಶ ಸಂಖ್ಯೆ:ಡಿಇ: 17/2007–08 ದಿ:04–07–2008
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ:ಅಪೀಲು:33/2008–09 ದಿ:06–11–2008
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:05–02–09
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)118/2008–09 ದಿನಾಂಕ:07–05–2009

**ಪ್ರಸ್ತಾವನೆ:**

ಶ್ರೀ ಸ್ವಾಮಿದೊರೆ, ಸಿ.ಎಚ್.ಸಿ., ಇವರು ನಂಜನಗೂಡು ಪೊಲೀಸ್ ಠಾಣೆಯಲ್ಲಿ ಹೆಡ್ ಕಾನ್ಸ್‌ಟೇಬಲ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಅನಧಿಕೃತವಾಗಿ ಗೈರುಹಾಜರಾದ ಕಾರಣದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷರೋಪಣೆ:**

1) "ನೀವು ಪದೇ ಪದೇ ಅನಧಿಕೃತವಾಗಿ ಗೈರು ಹಾಜರಾಗುವ ಪ್ರವೃತ್ತಿಯುಳ್ಳವರಾಗಿದ್ದು, ಈ ಹಿಂದೆ ಗೈರುಹಾಜರಿಯಾದ ಅವಧಿಗಳನ್ನು ಲಘು ಶಿಕ್ಷೆ ಹಾಗೂ ಕಠಿಣ ಶಿಕ್ಷೆ ವಿಧಿಸುವುದರ ಮೂಲಕ ಗೈರು ಹಾಜರಿ ಅವಧಿಗಳನ್ನು ಇತ್ಯರ್ಥಪಡಿಸಿದ್ದರೂ ಸಹ ಈ ಹವ್ಯಾಸದಲ್ಲಿ ಯಾವುದೇ ಸುಧಾರಣೆಯಾಗದೇ ಪುನ: ದಿ:14–07–07 ರಿಂದ ಅನಧಿಕೃತ

ಗೈರುಹಾಜರಾಗಿರುವುದರ ಮೂಲಕ ಕರ್ತವ್ಯದಲ್ಲಿ ಬೇಜವಾಬ್ದಾರಿತನ, ನಿರ್ಲಕ್ಷತೆ ಹಾಗೂ ಅಶಿಸ್ತು ಪ್ರದರ್ಶಿಸಿರುವ ಬಗ್ಗೆ."

2) ಈ ಅನಧಿಕೃತ ಗೈರು ಹಾಜರಿ ಸಂಬಂಧ ಹೊರಡಿಸಿದ ಡೆಸರ್ಟರ್ ನೋಟೀಸ್‌ನಲ್ಲಿ ನೀಡಿರುವ ಸೂಚನೆಯಂತೆ ನಿಗಧಿತ ಅವಧಿಯಲ್ಲಿ ಕರ್ತವ್ಯಕ್ಕೆ ಹಾಜರಾಗಲು ಪ್ರಯತ್ನಿಸದೇ ಅಥವಾ ಗೈರುಹಾಜರಿ ಬಗ್ಗೆ ಯಾವುದೇ ಮಾಹಿತಿ ನೀಡದೇ ಮೇಲಾಧಿಕಾರಿಗಳ ಸೂಚನೆಯನ್ನು ಬೇಜವಾಬ್ದಾರಿ ಹಾಗೂ ನಿರ್ಲಕ್ಷತೆಯಿಂದ ಉಲ್ಲಂಘಿಸಿ ಅಶಿಸ್ತು ಪ್ರದರ್ಶಿಸಿರುವ ಬಗ್ಗೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿ:04–07–08ರ ಆದೇಶದಲ್ಲಿ ಅರ್ಜಿದಾರರನ್ನು ಕಡ್ಡಾಯ ನಿವೃತ್ತಿಗೊಳಿಸಲಾಗಿದೆ ಹಾಗೂ ದಿ:14–07–2007 ರಿಂದ ಶಿಸ್ತು ಪ್ರಾಧಿಕಾರದ ಆದೇಶ ಜಾರಿಯಾಗುವವರೆಗಿನ ಅವಧಿಯನ್ನು ವೇತನರಹಿತ ರಜೆಯೆಂದು ಪರಿಗಣಿಸಿದ್ದಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:06.11.08ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರ ವಿರುದ್ಧದ ಆರೋಪವು ಸಾಬೀತಾಗಿದ್ದು, ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 38 ಪೊಸಿಅ 2009 ಬೆಂಗಳೂರು, ದಿನಾಂಕ: 24ನೇ ಜುಲೈ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸ್ವಾಮಿದೊರೆ, ಮಾಜಿ ಸಿ.ಎಚ್.ಸಿ.–190, ಮೈಸೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1804

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಶಶಿಧರ, ಪಿ.ಸಿ.–5541, ಬಸವನಗುಡಿ ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಅಪರ ಪೊಲೀಸ್ ಕಮೀಷನರ್ (ಆಡಳಿತ) ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ:55/ಡಿಇ.1/ಆರ್–6/2006 ದಿ:20–06–2007

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ:68/ಅಪೀಲ/2007 ದಿ:10–03–08

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:14–08–2008

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)62/2008–09 ದಿ:18–12–2008

5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ 02 ಸಿಎನ್‌ಎಸ್ 2009 ದಿನಾಂಕ:12.05.2009

**ಪ್ರಸ್ತಾವನೆ:**

ಶ್ರೀ ಶಶಿಧರ, ಪಿ.ಸಿ.–5541, ಬಸವನಗುಡಿ ಪೊಲೀಸ್ ಠಾಣೆ, ಇವರು ಈ ಹಿಂದೆ ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣದ ಇಮಿಗ್ರೇಷನ್ ವಿಭಾಗದಲ್ಲಿ ಓ.ಓ.ಡಿ.ಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯ ದುರುಪಯೋಗದ ಆರೋಪದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು

ನಿಯಮಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷರೋಪಣೆ:**

"ಶ್ರೀ ಶಶಿಧರ, ಪಿ.ಸಿ.–5541, ಸಿದ್ದಾಪುರ ಪೊಲೀಸ್ ಠಾಣೆ (ಹಾಲಿ ಬಸವನಗುಡಿ ಪೊಲೀಸ್ ಠಾಣೆ) ಆದ ನಿಮ್ಮನ್ನು ದಿ:08–08–2006 ರಂದು ರಾತ್ರಿ ಕರ್ತವ್ಯಕ್ಕೆ ವಿಮಾನ ನಿಲ್ದಾಣದ ಆರೈವಲ್ ವಿಭಾಗದಲ್ಲಿ ಇಮಿಗ್ರೇಷನ್ ಕ್ಲೀಯರೆನ್ಸ್ ಅಧಿಕಾರಿಯಾದ ಪಿ.ಐ. ಇಮಿಗ್ರೇಷನ್ ಕ್ಲೀಯರೆನ್ಸ್ ಮಾಡುವ ಸಲುವಾಗಿ ರಾತ್ರಿ ಪಾಳೆಯ ಉಸ್ತುವಾರಿ ಅಧಿಕಾರಿಯಾದ ಪಿ.ಐ. ಇಮಿಗ್ರೇಷನ್ ವಿಭಾಗ ರವರು ನಿಮ್ಮನ್ನು ಕೌಂಟರ್ ನಂ 11ರಲ್ಲಿ ಸೀಟ್ ನಂ: 12 ಕೊಟ್ಟು ಕರ್ತವ್ಯಕ್ಕೆ ನೇಮಕಮಾಡಿದ್ದು, ದಿ:08–08–2006 ರಂದು ರಾತ್ರಿ 23–15 ಗಂಟಗೆ ಮಲೇಷಿಯನ್ ಏರ್‌ಲೈನ್ಸ್ ವಿಮಾನ ಸಂಖ್ಯೆ:ಎಂ.ಎಚ್.192ರಲ್ಲಿ ಆಗಮಿಸಿದ ಭಾರತೀಯ ಪ್ರಯಾಣಿಕರ ಪೈಕಿ ಶ್ರೀ.ಉನ್‌ವಲ್ಲಾ ಜೆಮ್‌ಶೆಡ್ ಸೈರಸ್ ಎಂಬುವವರು ಅವರ ಮಗ ಶ್ರೀ.ಸೈರೀಸ್ ಉನ್‌ವಲ್ಲಾ ಜುಬಿನ್ ರವರ ಜೊತೆ ಬಂದಿದ್ದು, ಅವರು ಇಮಿಗ್ರೇಷನ್ ಕ್ಲಿಯರೆನ್ಸ್ ಸಲುವಾಗಿ ಅರೈವಲ್ ವಿಭಾಗದ ಕೌಂಟರ್ ನಂ11ರಲ್ಲಿದ್ದ ನಿಮ್ಮ ಬಳಿಗೆ ಬಂದು ಅವರ ಪಾಸ್ ಪೋರ್ಟ್ ಮತ್ತು ಎಂಬಾರ್‌ಕೇಷನ್ ಕಾರ್ಡನ್ನು ಹಾಜರುಪಡಿಸಿ ಇಮಿಗ್ರೇಷನ್ ಕ್ಲಿಯರೆನ್ಸ್ ಮಾಡಿಕೊಡುವಂತೆ ಕೋರಿದ್ದು, ಆಗ ನೀವು ಉನ್‌ವಲ್ಲಾ ಜೆಮ್‌ಶೆಡ್ ಸೈರಸ್ ರವರಿಗೆ ನಿಮ್ಮ ಪಾಸ್‌ಪೋರ್ಟ್ ನಂಬರ್ ಎಲ್.ಓ.ಸಿ.ಯಲ್ಲಿ ಇರುತ್ತದೆ, ಆದ್ದರಿಂದ ನಿಮ್ಮ ಪಾಸ್ ಪೋರ್ಟನ್ನು ಅಮಾನತ್ತು ಪಡಿಸಿಕೊಳ್ಳಬೇಕಾಗುತ್ತದೆ ಎಂದು ಅವರಿಗೆ ತಿಳಿಸಿ ಅವರ ಮೇಲೆ ಮಾನಸಿಕ ಒತ್ತಡವನ್ನು ಹೇರಿ ಅವರಿಂದ ಬಲವಂತವಾಗಿ ಆರ್ಥಿಕ ಅಪೇಕ್ಷೆ ಪಡೆಯಲು ಪ್ರಯತ್ನಪಟ್ಟು ಇಮಿಗ್ರೇಷನ್ ವಿಭಾಗದಲ್ಲಿ ಅತ್ಯಂತ ಜವಾಬ್ದಾರಿಯುತವಾದ ಸೂಕ್ಷ್ಮ ಸ್ಥಳದಲ್ಲಿ ಕರ್ತವ್ಯ ಮಾಡುತ್ತಿರುವ ನೀವು ನಿಮ್ಮ ಕರ್ತವ್ಯ ವ್ಯಾಪ್ತಿಯನ್ನು ಮೀರಿ ಕಾನೂನುಬದ್ಧವಾಗಿ ಎಲ್ಲಾ ದಾಖಲೆ ಗಳನ್ನು ಹೊಂದಿದ್ದ ಪಾಸ್‌ಪೋರ್ಟ್ ನಂಬರ್ ಎ–8505189ರಲ್ಲಿ ಜಮಾಲುಲ್ಲಾ ಆಜಾಂ ಬಿನ್ ಜೊಹಾರಿ ಎಂಬ ಮಲೇಷ್ಯ ಪ್ರಜೆಯ ಹೆಸರಿನಲ್ಲಿನ ಎಲ್.ಓ.ಸಿ. ನಂಬರ್ 1999100530ನ್ನು ಕಂಪ್ಯೂಟರ್‌ನಲ್ಲಿ ತೋರಿಸಿ ಅವರಿಗೆ ಮಾನಸಿಕವಾಗಿ ಒತ್ತಡ ಹೇರಿ ನಿಮ್ಮ ಅಧಿಕಾರವನ್ನು ದುರುಪಯೋಗಪಡಿಸಿಕೊಂಡು ಬ್ಲಾಕ್‌ಮೇಲ್ ತಂತ್ರ ಅನುಸರಿಸಿ ಶ್ರೀ.ಉನ್‌ವಲ್ಲಾ ಜೆಮ್‌ಶೆಡ್ ಸೈರೀಸ್ ರವರಿಂದ ಬಲವಂತವಾಗಿ ಆರ್ಥಿಕ ಆಪೇಕ್ಷ ಪಡೆಯಲು ಪ್ರಯತ್ನಿಸಿರುವುದು ಸ್ಪಷ್ಟವಾಗಿ ಕಂಡು ಬಂದಿರುತ್ತೆ.

ನೀವು ಶಿಸ್ತು ಇಲಾಖೆಯಲ್ಲಿದ್ದುಕೊಂಡು ಅಂತರರಾಷ್ಟ್ರೀಯ ವಿಮಾನ ನಿಲ್ದಾಣದ ಇಮಿಗ್ರೇಷನ್‌ನಂತಹ ಸೂಕ್ಷ್ಮ ಸ್ಥಳಗಳಲ್ಲಿ ಕೆಲಸ ಮಾಡುವಾಗ ಭಾರತೀಯ ಪ್ರಜೆ ಶ್ರೀ.ಉನ್‌ವಲ್ಲಾ ಜೆಮ್‌ಶೆಡ್ ಸೈರಸ್, ರವರ ರಹದಾರಿ ಪತ್ರ ಮತ್ತು ಇತರೆ ಎಲ್ಲಾ ದಾಖಲೆಗಳು ಕಾನೂನಿನಂತೆ ಸರಿಯಾಗಿದ್ದರು ಸಹ ಸರಿಇಲ್ಲವೆಂದು ಅವರ ಮೇಲೆ ಬ್ಲಾಕ್‌ಮೇಲ್ ತಂತ್ರ ಅನುಸರಿಸಿ, ಅವರಿಂದ ಆರ್ಥಿಕ ಅಪೇಕ್ಷೆ ಪಡೆಯಲು ಪ್ರಯತ್ನಿಸಿರುವುದು ಮೇಲ್ನೋಟಕ್ಕೆ ಗೋಚರವಾಗಿರುತ್ತೆ.

ನೀವು ಶಿಸ್ತು ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿದ್ದು, ಕರ್ತವ್ಯದ ಮೇಲೆ ಇರುವ ಸಮಯದಲ್ಲಿ ನಿಮ್ಮ ಕರ್ತವ್ಯ ದುರುಪಯೋಗಪಡಿಸಿಕೊಂಡು ಶಿಸ್ತು ಇಲಾಖೆಯ ನಿಯಮಾವಳಿ ಮತ್ತು ಕಾನೂನನ್ನು ಉಲ್ಲಂಘನೆ ಮಾಡಿರುತ್ತೀರೆಂದು ಆರೋಪಿಸಲಾಗಿದೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿಲ್ಲವೆಂದು ಸಲ್ಲಿಸಿದ ವರದಿಯನ್ನು ಶಿಸ್ತು ಪ್ರಾಧಿಕಾರವು ವರದಿಯನ್ನು ಒಪ್ಪದೆ, ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಅಪರ ಪೊಲೀಸ್ ಕಮೀಷನರ್ (ಆಡಳಿತ) ಬೆಂಗಳೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ: 20–06–2007ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗುವಂತೆ ಒಂದು ವರ್ಷ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿ ದಿನಾಂಕ:11–08–06 ರಿಂದ 18–12–2006ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದ್ದಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು, ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ: 10–03–08ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ವಿಧಿಸಿದ ದಂಡನೆಯ ಪ್ರಮಾಣವು ಅಧಿಕವಾಗಿದೆ ಎಂದು ತೀರ್ಮಾನಿಸಿ, ಪರಿಷ್ಕರಣ ಮೇಲ್ಮನವಿಯನ್ನು ಭಾಗಶ: ಪುರಸ್ಕರಿಸಲು ಸರ್ಕಾರವು ತೀರ್ಮಾನಿಸಿ, ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಕೋರಲಾಗಿತ್ತು. ಓದಲಾದ (5)ರ ಪತ್ರದಲ್ಲಿ ಆಯೋಗವು ಸರ್ಕಾರದ ಪ್ರಸ್ತಾವನೆಗೆ ಸಹಮತಿಸದೇ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಎತ್ತಿಹಿಡಿದಿರುವ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 251 ಪೊಸಿಅ 2008 ಬೆಂಗಳೂರು, ದಿನಾಂಕ: 24ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಶಶಿಧರ, ಪಿ.ಸಿ.–5541, ಬಸವನಗುಡಿ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1805

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಸ್.ಎನ್. ಬೀರೇಗೌಡ, ಸಿ.ಎಚ್.ಸಿ.–77, ಸಂಚಾರಿ ಪೊಲೀಸ್ ಠಾಣೆ, ಹಾಸನ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ:ಸಿಬ್ಬಂದಿ/211/2003–04 ದಿ:29–09–2006
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ:ಅಪೀಲು (6)56/2006–07, ಓ.ಬಿ:ಸಂ:20/07–08 ದಿನಾಂಕ:16–06–2007
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:15–10–2007
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)87/2007–08 ದಿ:18–01–2008
5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ 129 ಸಿಎನ್‌ಎಸ್ 2008 ದಿನಾಂಕ:18–06–2009

**ಪ್ರಸ್ತಾವನೆ:**

ಶ್ರೀ ಎಸ್.ಎನ್. ಬೀರೇಗೌಡ, ಸಿ.ಎಚ್.ಸಿ.–77, ಸಂಚಾರಿ ಪೊಲೀಸ್ ಠಾಣೆ, ಇವರು ಹಾಸನ ನಗರದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಬೇಜವಾಬ್ದಾರಿತನ, ನಿರ್ಲಕ್ಷತೆ ಹಾಗೂ ಕರ್ತವ್ಯಲೋಪವೆಸಗಿದ ಕಾರಣದ ಮೇಲೆ ಇವರನ್ನೊಳಗೊಂಡಂತೆ ಇತರೆ ಮೂವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6ರ ಜೊತೆ 8ರಡಿ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷರೋಪಣೆ:**

1) ಹಾಸನ ಸಂಚಾರಿ ಪೊಲೀಸ್ ಠಾಣೆಗೆ ನೀಡಲಾದ ಕ್ರೇನ್ (ಟೈಗರ್)ನ್ನು ಉಪಯೋಗಿಸಿ ಸಂಚಾರಿ ಠಾಣೆಗೆ ಎಳೆತಂದ ಹಾಗೂ ಪ್ರಕರಣಗಳಲ್ಲಿ ಒಳಗೊಂಡ ವಾಹನಗಳ ಮಾಲೀಕರುಗಳಿಂದ ಟೈಗರ್ ಛಾರ್ಜಸ್ ಎಂದು ಹಾಗೂ ದಂಡವೆಂದು ಲಕ್ಷಾಂತರ ಹಣವನ್ನು ವಸೂಲು ಮಾಡಿರುವುದು.
2) ಸದರಿ ವಾಹನಗಳ ಮಾಲೀಕರಿಂದ ಹಣ ವಸೂಲು ಮಾಡಲು ಇಲಾಖೆಯಿಂದ ಅಥವಾ ಸರ್ಕಾರದ ಅನುಮತಿಯಿಲ್ಲದೆ ಅನಧಿಕೃತವಾಗಿ ರಶೀತಿಗಳನ್ನು ಪ್ರಿಂಟ್‌ಮಾಡಿಸಿಕೊಂಡು ಅವ್ಯವಹಾರ ನಡೆಸಿರುವುದು.

3) ಈ ರೀತಿ ಅಕ್ರಮವಾಗಿ ವಸೂಲು ಮಾಡಿದ ಲಕ್ಷಾಂತರ ರೂಪಾಯಿಗಳಿಗೆ ಸಮರ್ಪಕವಾಗಿ ಲೆಕ್ಕಪತ್ರ ನಿರ್ವಹಿಸದೆ ಮನಸ್ಸಿಗೆ ತೋಚಿದಂತೆ ಖರ್ಚುಮಾಡಿ ಆ ಮೂಲಕ ಸರ್ಕಾರಕ್ಕೆ ವಂಚನೆ, ಸದರಿ ಹಣದ ದುರುಪಯೋಗ, ಅಧಿಕಾರ ದುರುಪಯೋಗ, ಕರ್ತವ್ಯದಲ್ಲಿ ಬೇಜವಾಬ್ದಾರಿತನ, ಕರ್ತವ್ಯ ನಿರ್ಲಕ್ಷ್ಯತೆ ಹಾಗೂ ಕರ್ತವ್ಯ ಲೋಪವೆಸಗಿರುವ ಆರೋಪಗಳು.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:29–09–2006ರ ಆದೇಶದಲ್ಲಿ ಅರ್ಜಿದಾರರ ವೇತನವನ್ನು ಮುಖ್ಯಪೇದೆ ಹುದ್ದೆಯ ವೇತನದ ಕನಿಷ್ಠ ಹಂತಕ್ಕೆ ಇಳಿಸಿ, ಈ ಹಂತದಿಂದ ಹೊಸದಾಗಿ ವಾರ್ಷಿಕ ವೇತನ ಬಡ್ತಿಯನ್ನು ಗಳಿಸುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:16–06–2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರ ವಿರುದ್ಧದ ಆರೋಪವು ಸಾಬೀತಾಗಿದೆ ಆದರೆ ಶಿಸ್ತುಪ್ರಾಧಿಕಾರದ ದಂಡನಾದೇಶವು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಯ ನಿಯಮ 59(1)(ಬಿ)ಗೆ ವಿರುದ್ಧವಾಗಿರುವುದನ್ನು ಗಮನಿಸಿ, ದಂಡನಾದೇಶವು ತಾಂತ್ರಿಕ ದೋಷಪೂರಿತ ವಾಗಿದೆಯೆಂದು ಪರಿಗಣಿಸಿ, ಪರಿಷ್ಕರಣ ಮೇಲ್ಮನವಿಯನ್ನು ಭಾಗಶ: ಪುರಸ್ಕರಿಸುವ ಬಗ್ಗೆ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಓದಲಾದ (5)ರ ಪತ್ರದಲ್ಲಿ ಪಡೆದು, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 67 ಪೊಸಿಅ 2009 ಬೆಂಗಳೂರು, ದಿನಾಂಕ: 24ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಎನ್. ಬೀರೇಗೌಡ, ಸಿ.ಎಚ್.ಸಿ.–77, ಸಂಚಾರಿ ಪೊಲೀಸ್ ಠಾಣೆ, ಹಾಸನ ನಗರ, ಇವರಿಗೆ ಶಿಸ್ತುಪ್ರಾಧಿಕಾರದ ದಿ:29–09–2006ರ ದಂಡನಾದೇಶವನ್ನು ಭಾಗಶ: ಮಾರ್ಪಡಿಸಿ, ಇವರ ವೇತನವನ್ನು ಮುಖ್ಯ ಪೇದೆ ಹುದ್ದೆಯ ವೇತನ ಶ್ರೇಣಿಯ ಕನಿಷ್ಠ ವೇತನಕ್ಕೆ 2 ವರ್ಷಗಳ ಅವಧಿಗೆ ಸಂಚಿತ ಪರಿಣಾಮ ರಹಿತವಾಗಿ ಇಳಿಸುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1807

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ವಿ. ಕೃಷ್ಣಪ್ಪ, ಪಿ.ಐ., ಜಿಲ್ಲಾ ಗುಪ್ತವಾರ್ತೆ, ಜಿಲ್ಲಾ ಪೊಲೀಸ್ ಕಛೇರಿ, ಕೆ.ಜಿ.ಎಫ್., ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ:ಅಪೀಲು(6)49/2005–06 ಓ.ಬಿ:ಸಂ:11/2008–09 ದಿ:03–05–2008
2) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:25–07–2008
3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)63/2008–09 ದಿ:23–10–2009
4) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ 219 ಸಿಎನ್‌ಎಸ್ 2008 ದಿನಾಂಕ:12–05–2009

**ಪ್ರಸ್ತಾವನೆ:**

ಶ್ರೀ ವಿ.ಕೃಷ್ಣಪ್ಪ, ಪಿ.ಐ., ಡಿ.ಎಸ್.ಬಿ., ಕೆ.ಜಿ.ಎಫ್., ಇವರು ಈ ಹಿಂದೆ ಇಂಡಿ ಪೊಲೀಸ್ ಠಾಣೆಯಲ್ಲಿ ಪೊಲೀಸ್ ಸಬ್–ಇನ್ಸ್‌ಪೆಕ್ಟರ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರ ವಿರುದ್ಧ ಕರ್ತವ್ಯಲೋಪ, ಬೇಜವಾಬ್ದಾರಿತನ, ಘೋರ ನಿರ್ಲಕ್ಷತೆ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7 ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷರೋಪಣೆ:**

"ಶ್ರೀ ವಿ.ಕೃಷ್ಣಪ್ಪ, ಪಿ.ಐ., ಡಿ.ಎಸ್.ಬಿ., ಪೊಲೀಸ್ ಅಧೀಕ್ಷಕರ ಕಛೇರಿ, ಕೆ.ಜಿ.ಎಫ್., ಈ ಹಿಂದೆ ಇಂಡಿ ಪೊಲೀಸ್ ಠಾಣೆ, ರಾಯಚೂರು ಜಿಲ್ಲೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ:13–07–2004 ರಂದು ಮಹಾದೇವ ತಂದೆ ಕಲ್ಲಪ್ಪ ದಶವಂತ, 35 ವರ್ಷ, ಚನ್ನದಾಸರ ಜಾತಿ ಮಾವಿನಹಳ್ಳಿ ರವರು ಖುದ್ದು ನಿಮ್ಮನ್ನು ಭೇಟಿಯಾಗಿ ದಿನಾಂಕ:11–07–2004 ರಂದು ಕೊಟ್ಟ ಫಿರ್ಯಾದುವಿನ ವಿಷಯವಾಗಿ ವಿಚಾರಿಸಲಾಗಿ ನೀವು ಜಾತಿಯ ಬಗ್ಗೆ ವಿಚಾರಣೆ ಮಾಡುತ್ತಾ ಇದ್ದೇವೆ ಎಂಬುದಾಗಿ ಹೇಳಿ ವಿಳಂಬ ನೀತಿಯನ್ನು ಅನುಸರಿಸಿರುತ್ತೀರಿ. ಅಲ್ಲದೇ ನೀವೂ ಸಹ ನಿಮಗೆ ದಿ:11–07–2004 ರಂದು ಪಿರ್ಯಾದಿಯು ನೀಡಿದ ಪಿರ್ಯಾದುವಿನ ಬಗ್ಗೆ ತಿಳಿದರೂ ವಿಚಾರ ಮಾಡದೇ ಅಂದಾದರೂ ಪ್ರಕರಣವನ್ನು ದಾಖಲಿಸಿಕೊಳ್ಳದೇ, ಕೇವಲ ದಿ:16–07–04 ರಂದು ಡಿ.ಎಸ್.ಪಿ., ಇಂಡಿ ರವರಿಗೆ ಪಿರ್ಯಾದಿಯು ಅರ್ಜಿ ಸಲ್ಲಿಸಿದ್ದು, ಅವರು ಸಿ.ಪಿ.ಐ., ಇಂಡಿ ರವರಿಗೆ ಸೂಕ್ತ ಕ್ರಮಕ್ಕಾಗಿ ಕಳುಹಿಸಿದ್ದು, ಸಿ.ಪಿ.ಐ. ರವರು ಪಿ.ಎಸ್.ಐ. ರವರಿಗೆ ಪ್ರಕರಣ ದಾಖಲಿಸಿಕೊಳ್ಳುವ ಬಗ್ಗೆ ತಿಳಿಸಿದ ನಂತರವೇ ದಿ:17–07–2004 ರಂದು ಈ ಪ್ರಕರಣವನ್ನು ದಾಖಲಿಸಿಕೊಂಡಿರುತ್ತೀರಿ. ಇದರಿಂದಾಗಿ, ನೀವು ಸದರಿ ಘಟನೆಯ ಬಗ್ಗೆ ಕಾನೂನು ಕ್ರಮ ಜರುಗಿಸಲು ಆರು ದಿನ ವಿಳಂಬ ನೀತಿ ಅನುಸರಿಸಿ ಪಿರ್ಯಾದಿಯು ತಮಗಾದ ಅನ್ಯಾಯವನ್ನು ತೋಡಿಕೊಂಡಿದ್ದರೂ ಸಹ ಅದರ ಬಗ್ಗೆ ಕಾನೂನು ಕ್ರಮ ಜರುಗಿಸದೇ ಪ್ರಕರಣ ಮುಚ್ಚಿಹಾಕಿರುತ್ತಾರೆ.

ನಿಮಗೆ ಪಿರ್ಯಾದುದಾರನು ಪರಿಶಿಷ್ಟ ಜಾತಿ/ಪಂಗಡಕ್ಕೆ ಸೇರಿದವನೆಂದು 2001ನೇ ಸಾಲಿನಿಂದ ಠಾಣಾ ದಾಖಲೆಗಳು ಇರುವ ಬಗ್ಗೆ ತಿಳುವಳಿಕೆ ಇದ್ದರೂ ಸಹ ಪಿರ್ಯಾದಿದಾರನು ಮತ್ತು ದಿ:13–07–2004 ರಂದು ನಿಮಗೆ ತನ್ನ ಜಾತಿಯ ಪ್ರಮಾಣ ಪತ್ರ ಒದಗಿಸಿದ್ದರೂ ಸಹ ಹಾಗೂ ದಿ:29–07–2004 ರಂದೇ ತಹಶೀಲ್ದಾರ್ ರವರಿಂದ ಪಡೆದ ಪ್ರಮಾಣ ಪತ್ರದ ಆಧಾರದ ಮೇಲೆ ಸದರಿ ಪ್ರಕರಣದಲ್ಲಿ ಕಲಂ 3(1)(10)(11) ಎಸ್‌ಸಿ/ಎಸ್‌ಟಿ ಆಕ್ಟ್ ಅಳವಡಿಸಿಕೊಂಡಿದ್ದಲ್ಲಿ, ಈ ಪ್ರಕರಣದಲ್ಲಿ ಆರೋಪಿತರು ನಿರೀಕ್ಷಣಾ ಜಾಮೀನು ಪಡೆಯಲು ಸಾಧ್ಯ ವಾಗುತ್ತಿರಲಿಲ್ಲ. ಆದರೆ, ನೀವು ಆರೋಪಿತರ ಮೇಲೆ ಮೊ.ನಂ.224/2004 ಕಲಂ 447–143–147–148–354–504–427–506 ರೆ/ವಿ 149 ಐಪಿಸಿ ಕಲಂಗಳ ಅಡಿಯಲ್ಲಿ ಸಾದಾ ಪ್ರಕರಣ ದಾಖಲಿಸಿ ಇಲ್ಲಸಲ್ಲದ ಸಬೂಬು ಹೇಳಿಕೊಂಡು ಅನಾವಶ್ಯಕವಾಗಿ ಕಾಲ ವ್ಯಯಮಾಡಿ ಉದ್ದೇಶಪೂರ್ವಕವಾಗಿ ಈ ಪ್ರಕರಣದಲ್ಲಿ ಎಸ್‌ಸಿ/ಎಸ್‌ಟಿ ಕಲಂ ಅಳವಡಿಸಲು 2 ತಿಂಗಳು ವಿಳಂಬ ಮಾಡಿ ದಿ:30–07–04 ರಂದು ಆರೋಪಿತರು ಮಾನ್ಯ ನ್ಯಾಯಾಲಯದಿಂದ ಸುಲಭವಾಗಿ ನಿರೀಕ್ಷಣಾ ಜಾಮೀನು ಪಡೆದುಕೊಳ್ಳಲು ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಸಹಾಯ ಮಾಡಿ ನಿಮ್ಮ ಕರ್ತವ್ಯದಲ್ಲಿ ಕರ್ತವ್ಯಲೋಪ, ಬೇಜವಾಬ್ದಾರಿತನ, ಘೋರ ನಿರ್ಲಕ್ಷತೆ ಮತ್ತು ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ: 03–05–08ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಭವಿಷ್ಯದ ವಾರ್ಷಿಕ ವೇತನಬಡ್ತಿಗೆ ದಕ್ಕೆಯಾಗದಂತೆ ಎರಡು ವರ್ಷಗಳ ಮಟ್ಟಿಗೆ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಶಿಸ್ತು ಪ್ರಾಧಿಕಾರವು ವಿಧಿಸಿದ ದಂಡನೆಯನ್ನು ಮಾರ್ಪಡಿಸುವ ಕುರಿತು ಕರ್ನಾಟಕ ಲೋಕಸೇವಾ ಆಯೋಗವನ್ನು ಸಮಾಲೋಚಿಸಲಾಗಿದೆ, ಮೇಲೆ ಓದಲಾದ (4)ರ ಪತ್ರದಲ್ಲಿ ಆಯೋಗವು ಸರ್ಕಾರದ ಪ್ರಸ್ತಾವನೆಗೆ ಸಹಮತಿಸದೇ ಶಿಸ್ತುಪ್ರಾಧಿಕಾರದ ದಂಡನಾದೇಶವನ್ನು ಎತ್ತಿ ಹಿಡಿದಿರುವ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 243 ಪೊಸಿಅ 2008 ಬೆಂಗಳೂರು, ದಿನಾಂಕ: 24ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವಿ. ಕೃಷ್ಣಪ್ಪ, ಪಿ.ಐ., ಜಿಲ್ಲಾ ಗುಪ್ತವಾರ್ತೆ, ಕೆ.ಜಿ.ಎಫ್., ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1808

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಂ.ಎಸ್ ಮುರಳೀಕೃಷ್ಣ, ಮಾಜಿ ಸಿ.ಪಿ.ಸಿ.–513, ಮೈಸೂರು ಗ್ರಾಮಾಂತರ ಪೊಲೀಸ್ ಠಾಣೆ, ಮೈಸೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಮೈಸೂರು ಜಿಲ್ಲೆ, ಇವರ ಆದೇಶ ಸಂಖ್ಯೆ:ಡಿಇ/11/ 2007–08 ಓ.ಬಿ:389/07–08 ದಿ:29–03–2008
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ:ಅಪೀಲು:01/2008–09 ಓ.ಬಿ: 8/2008–09 ದಿ:03–05–2008
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:27–09–08
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು (2)93/2008–09 ದಿನಾಂಕ:04–02–2009.

**ಪ್ರಸ್ತಾವನೆ:**

ಶ್ರೀ ಎಂ.ಎಸ್ ಮುರಳೀಕೃಷ್ಣ, ಇವರು ಮೈಸೂರು ಗ್ರಾಮಾಂತರ ಪೊಲೀಸ್ ಠಾಣೆಯಲ್ಲಿ ಸಿ.ಪಿ.ಸಿ. ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷರೋಪಣೆ:**

> "ನೀವು ಪದೇ ಪದೇ ಅನಧಿಕೃತ ಗೈರುಹಾಜರಿಯಾಗುವ ಹವ್ಯಾಸವುಳ್ಳವರಾಗಿದ್ದು, ಈ ಹಿಂದೆ ಗೈರು ಹಾಜರಿಯಾದ ಅವಧಿಗಳನ್ನು ಲಘು ಶಿಕ್ಷೆ ಹಾಗೂ ಕಠಿಣ ಶಿಕ್ಷೆ ವಿದಿಸುವುದರ ಮೂಲಕ ಗೈರುಹಾಜರಿ ಅವಧಿಗಳನ್ನು ಇತ್ಯರ್ಥ ಪಡಿಸಿದ್ದರೂ ಸಹ ಇವರ ಈ ಹವ್ಯಾಸದಲ್ಲಿ ಯಾವುದೇ ಸುಧಾರಣೆಯಾಗದೇ ದಿನಾಂಕ: 20–06–07 ರಿಂದ ಅನಧಿಕೃತ ಗೈರುಹಾಜರಿಯಾಗಿರುವುದರ ಮೂಲಕ ಬೇಜವಾಬ್ದಾರಿ, ನಿರ್ಲಕ್ಷತೆ ಹಾಗೂ ಅಶಿಸ್ತು ಪ್ರದರ್ಶಿಸಿರುವ ಬಗ್ಗೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಮೈಸೂರು ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:29–03–08ರ ಆದೇಶದಲ್ಲಿ "ಅರ್ಜಿದಾರರನ್ನು ಕಡ್ಡಾಯ ನಿವೃತ್ತಿಗೊಳಿಸಿ ಆದೇಶಿಸಿದ್ದಾರೆ ಹಾಗೂ ಅನಧಿಕೃತವಾಗಿ ಗೈರುಹಾಜರಾದ ದಿನಾಂಕ:20–06–07 ರಿಂದ 24–12–07ರ ವರೆಗಿನ ಅವಧಿಯನ್ನು ವೇತನ ರಹಿತ ರಜೆಯೆಂದು ಪರಿಗಣಿಸಲಾಗಿದೆ."

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:03–05–08ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರ ವಿರುದ್ಧದ ಆರೋಪವು ಸಾಬೀತಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 55 ಪೊಸಿಅ 2009 ಬೆಂಗಳೂರು, ದಿನಾಂಕ: 8ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಎಸ್ ಮುರಳೀಕೃಷ್ಣ, ಮಾಜಿ ಸಿ.ಪಿ.ಸಿ.–513, ಮೈಸೂರು ಗ್ರಾಮಾಂತರ ಪೊಲೀಸ್ ಠಾಣೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1809 **ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎನ್.ವೈ. ಶಿವಣ್ಣವರ, ಮಾಜಿ ಎ.ಪಿ.ಸಿ.–152, ಡಿ.ಎ.ಆರ್., ಗದಗ, ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಗದಗ ಜಿಲ್ಲೆ, ಇವರ ಆದೇಶ ಸಂಖ್ಯೆ:ಡಿಇ/ಪಿಆರ್–6/1/2003 ಅ.ಪು. ಸಂಖ್ಯೆ:361/03 ದಿ:08–10–2003

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ:ಅಪೀಲು:184/ಉವ/2008 ದಿ:02–04–2008

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:08–12–08

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)103/2008–09 ದಿನಾಂಕ:08–05–2009

**ಪ್ರಸ್ತಾವನೆ:**

ಶ್ರೀ ಎನ್.ವೈ. ಶಿವಣ್ಣವರ, ಇವರು ಸಶಸ್ತ್ರ ಪೊಲೀಸ್ ಪೇದೆಯಾಗಿ ಡಿ.ಎ.ಆರ್. ಗದಗದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಘೋರ ಕರ್ತವ್ಯಲೋಪ ಹಾಗೂ ನಿಷ್ಕಾಳಜಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷರೋಪಣೆ:**

"ಆಪಾದಿತರಿಗೆ ದಿ:05–01–2003 ರಂದು ಸ್ಟ್ಯಾಂಡ್ ಬೈ ಕರ್ತವ್ಯವನ್ನು ನೇಮಿಸಲಾಗಿತ್ತು. ಸದರಿ ದಿನಾಂಕದಂದು ಸಾಯಂಕಾಲ 7–30 ಗಂಟೆಯ ಸುಮಾರಿಗೆ ಸದರಿಯವರು ಮಧ್ಯಪಾನ ಸೇವಿಸಿದ ಅಮಲಿನಲ್ಲಿ ಕಚೇರಿಯ ಒಳಗಡೆ ಬರುತ್ತಿದ್ದು, ಆ ವೇಳೆಯಲ್ಲಿ ಸೇಂಟ್ರಿ ಎಪಿಸಿ 203 ಎಂ.ಎಸ್. ದೇಸಾಯಿ ರವರು ಒಳಗಡೆ ಹೋಗದಂತೆ ತಡೆಯಲಾಗಿ, ಅವರನ್ನು ನೂಕಿ ಹೋಗಿ ಡ್ಯೂಟಿ ಆಫೀಸರ್ ಆರ್.ಎಸ್.ಐ., ಶ್ರೀ ಎಸ್.ಎಸ್. ಪಗಡಿಯವರನ್ನು ನೂಕಿ ಅವರ ಕರ್ತವ್ಯಕ್ಕೆ ಅಡೆತಡೆಯನ್ನುಂಟು ಮಾಡಿ ಆರ್.ಪಿ.ಐ. ಕಛೇರಿಯ ಒಳಗಡೆ ಓಡಿ ಹೋಗಿ ಟೇಬಲ್ ಮೇಲಿನ ಗ್ಲಾಸ್ ಒಡೆದು, ದೂರವಾಣಿಯನ್ನು ತನ್ನ ಮನ ಬಂದಂತೆ ಒಗೆದಿದ್ದು, ಅಲ್ಲದೆ ಜೆರಾಕ್ಸ್ ಮೆಷಿನನ್ನು ಜಗ್ಗಿ ಕೆಳಗೆ ಬೀಳಿಸುವ ಪ್ರಯತ್ನದಲ್ಲಿದ್ದರು, ಅಷ್ಟರಲ್ಲಿ ಎಂ.ಜಿ.ಗಾರ್ಡ್ ಕಮಾಂಡರ್ ಎಹೆಚ್‌ಸಿ 6 ವಿ.ಎಸ್. ಬಾವಿಕಟ್ಟಿ ಗಾರ್ಡ್ ಸಿಬ್ಬಂದಿಗಳಾದ ಎಪಿಸಿ 163 ಎಸ್.ವೈ. ಅರಹುಣಸಿ, ಎಪಿಸಿ–164 ಸಿ.ಜಿ. ಮಡಿವಾಳರ, ಎಪಿಸಿ–247 ಎಂ.ಜಿ. ಶಿರೋಳ ಮತ್ತು ಸ್ಟಾಫ್ ಸಿಬ್ಬಂದಿಗಳಾದ ಎಪಿಸಿ 196 ಆರ್.ಎಂ ಅಂಗಡಿ, ಎಪಿಸಿ–238 ಎಸ್.ಎನ್.ಮಾಳೇಕೊಪ್ಪ ಮತ್ತು ಎಪಿಸಿ–244 ಎಂ.ಕೆ.ಕಾತರಕಿ, ಡಿ.ಎ.ಆರ್ ಗದಗ ಇವರೆಲ್ಲರೂ ಕೂಡಿ ನಿಮ್ಮನ್ನು ಕಛೇರಿಯಿಂದ ಹೊರಗಡೆ ಕರೆದುಕೊಂಡು ಬರಲಾಗಿ ಕರ್ತವ್ಯ ಅಧಿಕಾರಿಗಳಾದ ಆರ್‌ಎಸ್‌ಐ ಎಸ್.ಎಸ್. ಪಗಡಿಯವರಿಗೆ ನಿಮ್ಮನ್ನು ಬಿಡುವುದಿಲ್ಲಾ ಸಾಯಿ ಹೊಡಿಯುತ್ತೇನೆ ಅಂತಾ ಜೀವದ ಬೆದರಿಕೆಯನ್ನು ಹಾಕಿ ನೀವು ಒಬ್ಬ ಶಿಸ್ತು ಇಲಾಖೆಯ ಪೊಲೀಸ್ ಇದ್ದು, ಅದನ್ನು ಮರೆತು ಶಿಸ್ತಿನ ಇಲಾಖೆಯ ವಿರುದ್ಧವಾಗಿ ನಡೆದಿದ್ದು, ಅಲ್ಲದೆ ದುರ್ನಡತೆಯಿಂದಾ ವರ್ತಿಸಿ ನಿಮ್ಮ ಕರ್ತವ್ಯದಲ್ಲಿ ಘೋರ ಕರ್ತವ್ಯಚ್ಯುತಿ ಹಾಗೂ ನಿಷ್ಕಾಳಜಿತನ ಪ್ರದರ್ಶಿಸಿರುವಿರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ

ಜಿಲ್ಲಾ ಪೊಲೀಸ್ ಅಧೀಕ್ಷಕರು, ಗದಗ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 08–10–03ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸಿ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿದ್ದಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:02–04–08ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಯಾವುದೇ ಸಮರ್ಥನೀಯ ಕಾರಣಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 08 ಪೊಸಿಅ 2009, ಬೆಂಗಳೂರು, ದಿನಾಂಕ: 8ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎನ್.ವೈ. ಶಿವಣ್ಣವರ, ಮಾಜಿ ಎ.ಪಿ.ಸಿ.–152, ಡಿ.ಎ.ಆರ್., ಗದಗ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1810 **ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಕೆ.ಎಸ್. ಕಲ್ಲೇದೇವರು, ಪಿ.ಎಸ್.ಐ., ಕಮಲಪುರ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧಿಕಾರಿ, ಬೀದರ್, ಇವರ ಆದೇಶ ಸಂಖ್ಯೆ:ಸಿಬ್ಬಂದಿ:4: ಲಶಿ/147:2005 ಓ.ಬಿ:890/06 ದಿ:13–03–2006
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ:ಅಪೀಲು:120/ಈವ:2006 ಓ.ಬಿ:73/ಈವ:2007 ದಿ:22–01–2007
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:25–08–2008
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)75/2008–09 ದಿನಾಂಕ:18–04–2009

**ಪ್ರಸ್ತಾವನೆ:**

ಶ್ರೀ ಕೆ.ಎಸ್. ಕಲ್ಲೇದೇವರು, ಪಿ.ಎಸ್.ಐ., ಕಮಲಪುರ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ, ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಮುಡಬಿ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯ ನಿರ್ಲಕ್ಷತೆ ಹಾಗೂ ದುರ್ನಡತೆಯ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7 ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷರೋಪಣೆ:**

"ನೀವು ಪಿ.ಎಸ್.ಐ. ಮುಡಬಿಯಲ್ಲಿ ಠಾಣಾಧಿಕಾರಿ ಅಂತಾ ಜವಾಬ್ದಾರಿಯುತ ಕರ್ತವ್ಯ ನಿರ್ವಹಿಸುತ್ತಿದ್ದು, ಪ್ರತಿಯೊಂದು ಈ ಕಾರ್ಯಾಲಯದ ವಿ.ಆರ್. ಅಥವಾ ಪಾಸ್‌ಪೋರ್ಟ್ ವೆರಿಫಿಕೇಶನ್ ಸಲುವಾಗಿ ನಿಮಗೆ ಕಳುಹಿಸಿ, ಖಚಿತ, ಸ್ಪಷ್ಟ ಅಭಿಪ್ರಾಯದ ವರದಿ ಕೊಡಲು ಸೂಚಿಸುತ್ತಿದ್ದು, ಈ ಸೂಚನೆ ಗಳನ್ವಯ ನೀವು ವಿಧಿಬದ್ದವಾಗಿ ಸಂಬಂಧಿಸಿದ ಠಾಣೆಯ ದಾಖಲಾತಿ ರಿಜಿಸ್ಟಗಳನ್ವಯ ಭೌತಿವಾಗಿ ಪರಿಶೀಲನೆ ಮಾಡಿ ವರದಿ ಸಲ್ಲಿಸುವ ನಿಮ್ಮ ಆದ್ಯ ಕರ್ತವ್ಯವಾಗಿದ್ದರೂ ಸಹ ಇದನ್ನು ಬದಿಗೊತ್ತಿ ಶ್ರೀ ಬಾಬು ತಂದೆ ಧರ್ಮಣ್ಣಾ ಸಾ:ಸುಂಟಾಣ ಇವರ ಮೇಲೆ ಮುಡಬಿ ಪೊಲೀಸ್ ಠಾಣೆಯಲ್ಲಿ ಅಪರಾಧ ಸಂ:98–2000 ಕಲಂ 147, 148, 149, 323, 324, 342, 427, 501 ಹಾಗೂ ಅಪರಾಧ ಸಂಖ್ಯೆ:100–2000 ಕಲಂ 107 ದ.ಪ್ರ.ಸ. ಪ್ರಕರಣಗಳಲ್ಲಿ ಆರೋಪಿಯಾಗಿದ್ದರೂ ಸಹ ಇವರ ಪಾಸ್‌ಪೋರ್ಟ್ ವೆರಿಫಿಕೇಶನ್ ವರದಿಯಲ್ಲಿ ಪಾಸ್‌ಪೋರ್ಟ್ ಕೊಡಿಸಲು ಶಿಫಾರಸ್ ಮಾಡಿ, ಇದ್ದ ಸಂಗತಿ ಮುಚ್ಚಿ ಹಾಕಿ ಉದ್ದೇಶ ಪೂರ್ವಕವಾಗಿ

ಮೇಲಾಧಿಕಾರಿ ಯವರಿಗೆ ಸುಳ್ಳು ವರದಿ ಸಲ್ಲಿಸಿ, ಕರ್ತವ್ಯ ನಿರ್ಲಕ್ಷ್ಯ ಹಾಗೂ ಖಂಡನೀಯ ದುರ್ನಡತೆ ಎಸಗಿರುವಿರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧಿಕಾರಿ, ಬೀದರ್, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 13–03–06ರ ಆದೇಶದಲ್ಲಿ "ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಒಂದು ವರ್ಷ ಕಾಲ ಮುಂದೂಡಿದ್ದಾರೆ."

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:22–01–07ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಹೊಸ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 303 ಪೊಸಿಅ 2008 ಬೆಂಗಳೂರು, ದಿನಾಂಕ: 8ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೆ.ಎಸ್. ಕಲ್ಲೇದೇವರು, ಪಿ.ಎಸ್.ಐ., ಕಮಲಪುರ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1811

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಚ್.ಎನ್. ಮಹಾಬಳೇಶ್ವರಪ್ಪ, ಪೊಲೀಸ್ ಇನ್ಸ್‌ಪೆಕ್ಟರ್, ವಿದ್ಯಾನಗರ ಪೊಲೀಸ್ ಠಾಣೆ, ಹುಬ್ಬಳ್ಳಿ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ:ಇವಿ/9/ಈವ/2001 ಆ.ಪು:ಸಂ:86/ಈವ/2007/840 ದಿ:20–02–2002
2) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:11–03–2008
3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಸಿಬಿ(8)50/2008–09 ದಿ:17–03–09
4) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ 33 ಸಿಎನ್‌ಎಸ್ 2009 ದಿನಾಂಕ:18–06–2009

**ಪ್ರಸ್ತಾವನೆ:**

ಶ್ರೀ ಎಚ್.ಎನ್. ಮಹಾಬಳೇಶ್ವರಪ್ಪ, ಪೊಲೀಸ್ ಇನ್ಸ್‌ಪೆಕ್ಟರ್, ವಿದ್ಯಾನಗರ ಪೊಲೀಸ್ ಠಾಣೆ, ಹುಬ್ಬಳ್ಳಿ, ಇವರು ಗಂಗಾವತಿ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಅತೀವ ನಿರ್ಲಕ್ಷತನ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷರೋಪಣೆ:**

"ಶ್ರೀ ಚನ್ನಪ್ಪಾ ಹರಸೂರು, ಎ.ಪಿ.ಪಿ., ರವರ ವಿರುದ್ಧ ಸುಳ್ಳು ಆಪಾದನೆ ಮಾಡಿ ಮೇಲಾಧಿಕಾರಿಯಲ್ಲಿ ತಪ್ಪು ಮಾಹಿತಿಯನ್ನು ನೀಡಿ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತನ ಹಾಗೂ ಬೇಜವಾಬ್ದಾರಿತನವನ್ನು ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ

ದಿನಾಂಕ:20–02–2002 ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಒಂದು ವರ್ಷಕಾಲ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಶಿಸ್ತು ಪ್ರಾಧಿಕಾರದ ದಂಡನೆಯನ್ನು ಭಾಗಶ: ಮಾರ್ಪಡಿಸುವ ಸಲುವಾಗಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಕೋರಲಾಗಿದ್ದು, ಆಯೋಗವು ಸರ್ಕಾರವು ಪ್ರಸ್ತಾಪಿಸಿರುವ ದಂಡನೆಯು ಲಘುವಾಗಿರುವುದರಿಂದ ಶಿಸ್ತು ಪ್ರಾಧಿಕಾರದ ದಂಡನೆಗೆ ಓದಲಾದ (5)ರ ಪತ್ರದಲ್ಲಿ ಸಹಮತಿ ನೀಡಿರುವ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 13 ಪೊಸಿಅ 2009 ಬೆಂಗಳೂರು, ದಿನಾಂಕ: 15ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಚ್.ಎನ್. ಮಹಾಬಳೇಶ್ವರಪ್ಪ, ಪೊಲೀಸ್ ಇನ್ಸ್‌ಪೆಕ್ಟರ್, ವಿದ್ಯಾನಗರ ಪೊಲೀಸ್ ಠಾಣೆ, ಹುಬ್ಬಳ್ಳಿ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1812 **ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಕೆ. ರಾಜೇಂದ್ರ ಪ್ರಸಾದ, ವೃತ್ತ ನಿರೀಕ್ಷಕರು, ಬಾಲ್ಕಿ ಪೊಲೀಸ್ ಠಾಣೆ, ಬೀದರ್ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಮೈಸೂರು ನಗರ, ಇವರ ಆದೇಶ ಸಂಖ್ಯೆ: ಇವಿ:18:2000–01 ಓ.ಬಿ:257/2001–02 ದಿ:17–01–2002
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ:ಸಿಬಿ(8)12/ 2002–03 ದಿ:07–04–2004
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:24–11–2008
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)12/2002–03 ದಿ:06–05–09

**ಪ್ರಸ್ತಾವನೆ:**

ಶ್ರೀ ಕೆ. ರಾಜೇಂದ್ರ ಪ್ರಸಾದ, ವೃತ್ತ ನಿರೀಕ್ಷಕರು, ಬಾಲ್ಕಿ ಪೊಲೀಸ್ ಠಾಣೆ, ಬೀದರ್ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಮೈಸೂರಿನ ಕುವೆಂಪುನಗರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಕರ್ತವ್ಯಲೋಪ, ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಇವರನ್ನೊಳಗೊಂಡಂತೆ ಇತರೇ ಮೂವರು ಸಿಬ್ಬಂದಿಗಳ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರ ಜೊತೆಗೆ 8 ರಡಿ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷರೋಪಣೆ:**

1. "ದಿ:08–03–2001 ರಂದು ಕುವೆಂಪುನಗರ ಸರ್ಕಾರಿ ಪದವಿಪೂರ್ವ ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿದ್ದ ಅಪ್ರಾಪ್ತ ವಯಸ್ಸಿನ ವಿದ್ಯಾರ್ಥಿನಿಯಾದ ಕು:ವಿನೋದ ಎಂಬಾಕೆಯನ್ನು ವಿಚಾರಣೆಯ ನೆಪದಲ್ಲಿ ನಿಯಮಬಾಹಿರ ವಾಗಿ ಠಾಣಾ ಸಿಬ್ಬಂದಿ ಮಹಿಳಾ ಪೇದೆ 139 ಶ್ರೀಮತಿ ಲಕ್ಷ್ಮಮ್ಮ ರವರ ಮೂಲಕ ಪೊಲೀಸ್ ಠಾಣೆಗೆ ಕರೆತಂದು ಕರ್ತವ್ಯದಲ್ಲಿ ಲೋಪವನ್ನು ಎಸಗಿರುವ ಬಗ್ಗೆ."
2. "ದಿ:08–03–2001 ರಂದು ಕುವೆಂಪುನಗರ ಸರ್ಕಾರಿ ಪದವಿಪೂರ್ವ ಕಾಲೇಜಿನ ವಿದ್ಯಾರ್ಥಿಯಾದ ಕು:ವಿನೋದ ಎಂಬಾಕೆಯನ್ನು ವಿಚಾರಣೆಯ ನೆಪದಲ್ಲಿ ಠಾಣೆಗೆ ಕರೆತಂದು ಆಕೆಗೆ ತೀವ್ರ ತರದ ಮಾನಸಿಕ ಹಾಗೂ ದೈಹಿಕ ಕಿರುಕುಳವನ್ನು ನೀಡಿ ಕರ್ತವ್ಯದಲ್ಲಿ ತೀವ್ರ ದುರ್ನಡತೆ ಯನ್ನು ಪ್ರದರ್ಶಿಸಿರುವ ಬಗ್ಗೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಕಮೀಷನರ್, ಮೈಸೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 17–01–2002ರ

ಆದೇಶದಲ್ಲಿ "ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವೇತನ ಬಡ್ತಿಗೆ ದಕ್ಕೆಯಾಗುವಂತೆ ಎರಡು ವರ್ಷಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ."

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 07–04–2004ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರ ವಿರುದ್ಧ ಆರೋಪ ಸಾಬೀತಾಗಿದೆ, ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಹೊಸ ಸಮರ್ಥನೀಯ ಕಾರಣಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 385 ಪೊಸಿಅ 2008 ಬೆಂಗಳೂರು, ದಿನಾಂಕ: 10ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೆ. ರಾಜೇಂದ್ರ ಪ್ರಸಾದ, ವೃತ್ತ ನಿರೀಕ್ಷಕರು, ಬಾಲ್ಕಿ ಪೊಲೀಸ್ ಠಾಣೆ, ಬೀದರ್, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1816 **ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಚ್.ವಿ.ಕೃಷ್ಣಮೂರ್ತಿ, ಮಾಜಿ ಎ.ಪಿ.ಸಿ.–2585, ಸಿ.ಎ.ಆರ್. ಉತ್ತರ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಸಿ.ಎ.ಆರ್. ಉತ್ತರ ಬೆಂಗಳೂರು, ಇವರ ಆದೇಶ ಸಂಖ್ಯೆ:3:ಡಿಇ:ಆರ್:06, 2004–05 ದಿನಾಂಕ: 20/28–01–2005
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಪರ ಪೊಲೀಸ್ ಕಮೀಷನರ್, ಸಿ.ಎ.ಆರ್., ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ:01/ ಅಪೀಲು–2/2006 ದಿ:25–06–08
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:18–07–08
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)46/2008–09 ದಿ:05–01–09
5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ 08 ಸಿಎನ್‌ಎಸ್ 09 ದಿನಾಂಕ:18–05–2009

**ಪ್ರಸ್ತಾವನೆ:**

ಶ್ರೀ ಎಚ್.ವಿ. ಕೃಷ್ಣಮೂರ್ತಿ, ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಸಿ.ಎ.ಆರ್. ಬೆಂಗಳೂರಿನಲ್ಲಿ ಎ.ಪಿ.ಸಿ. ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾದ ಹಿನ್ನೆಲೆಯಲ್ಲಿ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷರೋಪಣೆ:**

> "ಶ್ರೀ.ಎಚ್.ವಿ.ಕೃಷ್ಣಮೂರ್ತಿ, ಎ.ಪಿ.ಸಿ.–2585, ಪಂಗಡ ಸಿ.ಎ.ಆರ್ ಉತ್ತರ, ಥಣಿಸಂದ್ರ, ಬೆಂಗಳೂರು, ಆದ ನೀವು ದಿ:19–02–2004 ರಿಂದ ಯಾವ ಪೂರ್ವಾನುಮತಿಯನ್ನು ಪಡೆಯದೆ, ಹಾಗೂ ಯಾವುದೇ ರಜೆ ಮಂಜೂರಾತಿ ಪಡೆಯದೆ, ಪೋನ್ ಮುಖಾಂತರ ವಾಗಲಿ, ಯಾವುದೇ ವಿಧದಲ್ಲಿಯಾಗಲಿ, ನಿಮ್ಮ ಗೈರುಹಾಜರಿಯ ಕಾರಣವನ್ನು ಕಛೇರಿಗೆ ತಿಳಿಸದೇ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಿಯಾಗಿರುತ್ತೀರಿ ಹಾಗೂ ಗೈರುಹಾಜರಿಯಲ್ಲಿಯೇ ಮುಂದುವರಿದಿರುತ್ತೀರಿ, ನಿಮ್ಮ ಅಲ್ಪ ಸೇವಾವಧಿಗೆ ಸಂಬಂಧಿಸಿದ ಸೇವಾ ದಾಖಲೆಗಳನ್ನು ಪರಿಸೀಲಿಸಿದಾಗ ನೀವು ಕರ್ತವ್ಯದಿಂದ ಪದೇಪದೇ ಗೈರುಹಾಜರಾಗಿದ್ದು ಕಂಡುಬಂದಿದ್ದು

ಗೈರುಹಾಜರಿಯ ಹವ್ಯಾಸವನ್ನು ಬೆಳೆಸಿಕೊಂಡಿರುತ್ತೀರಿ. ಇದು ಶಿಸ್ತಿನ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ನಿಮ್ಮ ಅಶಿಸ್ತು, ದುರ್ನಡತೆ ಹಾಗೂ ಬೇಜವಾಬ್ದಾರಿಯನ್ನು ತೋರಿಸುತ್ತದೆ. "

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಸಿ.ಎ.ಆರ್. (ಉತ್ತರ) ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 20/28–01–05ರ ಆದೇಶದಲ್ಲಿ "ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಿ ದಿ:19–02–04 ರಿಂದ 28–01–05ರ ವರೆಗಿನ ಅನಧಿಕೃತ ಗೈರುಹಾಜರಾದ ಅವಧಿಯನ್ನು ವೇತನರಹಿತರಜೆ ಎಂದು ಪರಿಗಣಿಸಿದ್ದಾರೆ."

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಪರ ಪೊಲೀಸ್ ಆಯುಕ್ತರು, ಸಿ.ಎ.ಆರ್., ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ:25–06–08ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರ ವಿರುದ್ಧ ಹೊರಿಸಲಾದ ಆರೋಪವು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿದೆ. ಅರ್ಜಿದಾರರು ಸರ್ಕಾರದಲ್ಲಿ ಸಲ್ಲಿಸಿದ ಸೇವೆಯನ್ನು ಗಮನದಲ್ಲಿರಿಸಿ ಮಾನವೀಯ ದೃಷ್ಟಿಯಿಂದ ಶಿಸ್ತುಪ್ರಾಧಿಕಾರದ ದಂಡನಾದೇಶವನ್ನು ಭಾಗಶ: ಮಾರ್ಪಡಿಸಲು, ಸರ್ಕಾರವು ತೀರ್ಮಾನಿಸಿ, ಈ ಕುರಿತು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಓದಲಾದ (5)ರ ಪತ್ರದಲ್ಲಿ ಪಡೆದು, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 32 ಪೊಸಿಅ 2009 ಬೆಂಗಳೂರು, ದಿನಾಂಕ: 26ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಚ್.ವಿ.ಕೃಷ್ಣಮೂರ್ತಿ, ಮಾಜಿ ಎ.ಪಿ.ಸಿ.–2585, ಸಿ.ಎ.ಆರ್. (ಉತ್ತರ) ಬೆಂಗಳೂರು, ಇವರಿಗೆ ಶಿಸ್ತುಪ್ರಾಧಿಕಾರವು ವಿಧಿಸಿದ ದಂಡನಾದೇಶವನ್ನು ಭಾಗಶ: ಮಾರ್ಪಡಿಸಿ, ಸದರಿ ದಿ:28–01–05 ರಿಂದಲೇ ಜಾರಿಗೆ ಬರುವಂತೆ ಕಡ್ಡಾಯ ನಿವೃತ್ತಿಗೊಳಿಸಿ ಆದೇಶಿಸಿದೆ. ಅನಧಿಕೃತವಾಗಿ ಗೈರುಹಾಜರಾದ ದಿ:19–02–04 ರಿಂದ 28–01–05ರ ಅವಧಿಯನ್ನು ವೇತನ ರಹಿತ ರಜೆಯೆಂದು ಪರಿಗಣಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1848

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಗುರುದತ್ತ, ಮಾಜಿ ಸಿಪಿಸಿ–683, ಗೋಗಿ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ, ಜಿಲ್ಲೆ, ಇವರ ಆದೇಶ ಸಂಖ್ಯೆ: ಡಿಇ/27/2007 DOB No:485: 2008 ದಿನಾಂಕ:05–05–2008
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ:ಅಪೀಲು 39/ಈವ/2008/1944 ಅ.ಪು.ಸಂ:451/ಈವ/2008 ದಿ:29–08–08
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:23–09–2008
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)82/2008–09 ದಿ:07–01–2009
5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ 07 ಸಿಎನ್ಎಸ್ 09 ದಿನಾಂಕ:18.05.2009

**ಪ್ರಸ್ತಾವನೆ:**

ಶ್ರೀ ಗುರುದತ್ತ, ಸಿಪಿಸಿ–683, ಗೋಗಿ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಅನಧಿಕೃತವಾಗಿ ಗೈರುಹಾಜರಾದ ಆರೋಪದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷರೋಪಣೆ:**

"ನೀವು ಗೋಗಿ ಪೊಲೀಸ್ ಠಾಣೆಯಲ್ಲಿ 6ವರ್ಷಗಳಿಂದ ಕರ್ತವ್ಯ ನಿರ್ವಹಿಸುತ್ತಿದ್ದು, ನಿಮ್ಮ ಕರ್ತವ್ಯದ ಅವಧಿಯಲ್ಲಿ ದಿನಾಂಕ:08-02-2007 ರಿಂದ 06-07-07ರ ವರೆಗೆ ಗೈರುಹಾಜರಿಯಲ್ಲಿದ್ದು, ದಿ:23-03-07 ರಂದು 30 ದಿವಸದೊಳಗಾಗಿ ಕರ್ತವ್ಯಕ್ಕೆ ಹಾಜರಾಗುವಂತೆ ಪಲಾಯನ ನೋಟಿಸ್ ಜಾರಿ ಮಾಡಿದರೂ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ.

ಹೀಗೆ ಕರ್ತವ್ಯದಲ್ಲಿ ಅತೀವ ನಿಷ್ಕಾಳಜಿತನ ತೋರಿಸಿ ಗೈರು ಹಾಜರಾಗಿದ್ದು ನೀವು ಒಬ್ಬ ಶಿಸ್ತಿನ ಇಲಾಖೆಯ ಸಿಬ್ಬಂದಿಯಿದ್ದು ನಿಮ್ಮ ಮೇಲಾಧಿಕಾರಿಗಳಿಗೆ ಹೇಳದೆ ಕೇಳದೆ ಗೈರುಹಾಜರಾಗಿದ್ದೀರಿ ನಿಮಗೆ ಕರ್ತವ್ಯದ ಬಗ್ಗೆ ತಿಳುವಳಿಕೆ ಇದ್ದರೂ ಸಹ ಗೈರು ಹಾಜರಾಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:05-05-08ರ ಆದೇಶದಲ್ಲಿ ಅರ್ಜಿದಾರರರನ್ನು ಸೇವಯಿಂದ ವಜಾಗೊಳಿಸಿ ದಿ:09-02-07 ರಿಂದ 06-07-07ರ ವರೆಗಿನ ಅನಧಿಕೃತವಾಗಿ ಗೈರು ಹಾಜರಾದ ಅವಧಿಯನ್ನು 'ಸಂಬಳರಹಿತ ರಜೆ' ಎಂದು ಪರಿಗಣಿಸಿದ್ದಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:29-08-2008ರ ಆದೇಶದಲ್ಲಿ ಮೇಲ್ಮನವಿ ಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇಲಾಖಾ ವಿಚಾರಣೆಯಲ್ಲಿ ಆರೋಪವು ಸಾಬೀತಾಗಿದ್ದು, ಇವರು ಸೇವಾವಧಿಯನ್ನು ಗಣನೆಗೆ ತೆಗೆದುಕೊಂಡು ಮಾನವೀಯ ದೃಷ್ಟಿಯಿಂದ ಪರಿಷ್ಕರಣ ಮೇಲ್ಮನವಿಯನ್ನು ಭಾಗಶ: ಪುರಸ್ಕರಿಸಿ, ಶಿಸ್ತುಪ್ರಾಧಿಕಾರದ ದಂಡನಾದೇಶವನ್ನು ಭಾಗಶ: ಮಾರ್ಪಡಿಸಲು ಸರ್ಕಾರವು ತೀರ್ಮಾನಿಸಿ, ಈ ಕುರಿತು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಓದಲಾದ (5)ರ ಪತ್ರದಲ್ಲಿ ಪಡೆದು, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 333 ಪೊಸಿಅ 2008 ಬೆಂಗಳೂರು, ದಿನಾಂಕ: 26ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಗುರುದತ್ತ, ಮಾಜಿ ಸಿಪಿಸಿ-683, ಇವರಿಗೆ ಶಿಸ್ತುಪ್ರಾಧಿಕಾರ ವಿಧಿಸಿದ ದಂಡನಾದೇಶವನ್ನು ಭಾಗಶ: ಮಾರ್ಪಡಿಸಿ, ಸದರಿ ದಿ:05-05-08 ರಿಂದಲೇ ಜಾರಿಗೆ ಬರುವಂತೆ "ಕಡ್ಡಾಯ ನಿವೃತ್ತಿಗೊಳಿಸಿ" ಆದೇಶಿಸಿದೆ. ದಿ:09-02-07 ರಿಂದ 06-07-07ರ ವರೆಗಿನ ಅನಧಿಕೃತವಾಗಿ ಗೈರುಹಾಜರಾದ ಅವಧಿಯನ್ನು ಸಂಬಳರಹಿತ ರಜೆಯೆಂದು ಪರಿಗಣಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1849

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಬಿ.ಡಿ. ಪೂಜಾರಿ, ಮಾಜಿ ಸಿ.ಪಿ.ಸಿ., ಇಂಡಿ, ಪೊಲೀಸ್ ಠಾಣೆ, ಬಿಜಾಪುರ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬಿಜಾಪುರ, ಇವರ ಆದೇಶ ಸಂಖ್ಯೆ:ಸಿಬ್ಬಂದಿ-3/ಪಿಆರ್-1/2007 ಆ.ಪು.ಸಂ:464/07 ದಿ:31-08-2007
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ:ಅಪೀಲು:186:ಉವ:2007 ದಿ:09-05-08
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:15-09-2008
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)79/2008-09 ದಿ:15-01-2009
5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ 14 ಸಿಎನ್‌ಎಸ್ 09 ದಿನಾಂಕ:18-05-2009

**ಪ್ರಸ್ತಾವನೆ:**

ಶ್ರೀ ಬಿ.ಡಿ.ಪೂಜಾರಿ, ಸಿ.ಪಿ.ಸಿ.–994, ಇವರು ಇಂಡಿ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾದ ಹಿನ್ನೆಲೆಯಲ್ಲಿ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷರೋಪಣೆ:**

> "ನೀವು (ಸಿ.ಪಿ.ಸಿ.–994 ಶ್ರೀ.ಬಿ.ಡಿ.ಪೂಜಾರಿ) ಇಂಡಿ ಪೊಲೀಸ್ ಠಾಣೆಯಲ್ಲಿ ಸೇವೆ ಸಲ್ಲಿಸುತ್ತಿದ್ದು, ನೀವು ದಿ:23–06–06 ರಿಂದ ಮೇಲಾಧಿಕಾರಿಗಳಿಗೆ ತಿಳಿಸದೇ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರು ಉಳಿದಿದ್ದು, ಈ ಬಗ್ಗೆ ನಮಗೆ ಫಲಾಯನ ನೋಟೀಸು ಜ್ಯಾರಿಯಾದರೂ ಸಹ ಇನ್ನುವರೆಗೆ ಕರ್ತವ್ಯಕ್ಕೆ ಹಾಜರಾಗದೇ ಘೋರ ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬಿಜಾಪುರ, ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:31–08–07ರ ಆದೇಶದಲ್ಲಿ ಅರ್ಜಿದಾರರರನ್ನು ಸೇವೆಯಿಂದ ವಜಗೊಳಿಸಿ, ಅನಧಿಕೃತವಾಗಿ ಗೈರುಹಾಜರಾದ ದಿ:23–06–06 ರಿಂದ 04–03–07ರ ವರೆಗಿನ ಅವಧಿಯನ್ನು ವೇತನರಹಿತ ರಜೆ ಎಂದು ಪರಿಗಣಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರವಲಯ, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:09.05.08ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇವರ ವಿರುದ್ಧದ ಆರೋಪವು ಸಾಬೀತಾಗಿದೆ ಆದರೆ ಅರ್ಜಿದಾರರು ಸರ್ಕಾರದಲ್ಲಿ ಸಲ್ಲಿಸಿದ ಸೇವೆಯನ್ನು ಗಮನದಲ್ಲಿರಿಸಿಕೊಂಡು ಮಾನವೀಯ ದೃಷ್ಠಿಯಿಂದ ಶಿಸ್ತುಪ್ರಾಧಿಕಾರದ ಆದೇಶವನ್ನು ಭಾಗಶ: ಮಾರ್ಪಡಿಸಲು ಸರ್ಕಾರವು ತೀರ್ಮಾನಿಸಿ, ಈ ಕುರಿತು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಓದಲಾದ (5)ರ ಪತ್ರದಲ್ಲಿ ಪಡೆದು, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 334 ಪೊಸಿಅ 2008 ಬೆಂಗಳೂರು, ದಿನಾಂಕ: 26ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ.ಡಿ.ಪೂಜಾರಿ, ಮಾಜಿ ಸಿ.ಪಿ.ಸಿ. ಇಂಡಿ ಪೊಲೀಸ್ ಠಾಣೆ, ಇವರಿಗೆ ಶಿಸ್ತುಪ್ರಾಧಿಕಾರ ವಿಧಿಸಿದ ದಂಡನಾದೇಶವನ್ನು ಭಾಗಶ: ಮಾರ್ಪಡಿಸಿ, ಸದರಿ ದಿ:31–08–07 ರಿಂದಲೇ ಜಾರಿಗೆ ಬರುವಂತೆ ಕಡ್ಡಾಯ ನಿವೃತ್ತಿಗೊಳಿಸಿ ಆದೇಶಿಸಿದೆ. ಅರ್ಜಿದಾರರು ಅನಧಿಕೃತವಾಗಿ ಗೈರುಹಾಜರಾದ ದಿ:23–06–06 ರಿಂದ 04–03–07ರ ಅವಧಿಯನ್ನು 'ವೇತನರಹಿತ ರಜೆ' ಎಂದು ಪರಿಗಣಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1850

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಹನುಮಂತ, ಸಿ.ಪಿ.ಸಿ., ನೇತಾಜಿ ಪೊಲೀಸ್ ಠಾಣೆ, ರಾಯಚೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ರಾಯಚೂರು, ಇವರ ಆದೇಶ ಸಂಖ್ಯೆ: ಸಿಬ್ಬಂದಿ (3)ಇ.ವಿ/38/2006 ಓಬಿ:226/2008 ದಿನಾಂಕ:07–03–2008
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ:ಅಪೀಲು/33/ಈವ/2008, ಆ.ಪು. ಸಂ:597/ ಈವ/08 ದಿನಾಂಕ:13.11.2008
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:27–01–09
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2) 114/2008–09 ದಿನಾಂಕ: 23–05–2009

**ಪ್ರಸ್ತಾವನೆ:**

ಶ್ರೀ ಹನುಮಂತ, ಸಿ.ಪಿ.ಸಿ., ನೇತಾಜಿ ಪೊಲೀಸ್ ಠಾಣೆ, ರಾಯಚೂರು, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಇವರು ಮತ್ತು ಇನ್ನೋರ್ವ ಸಿಬ್ಬಂದಿಯ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರ ಜೊತೆಗೆ 8 ರಡಿಯಲ್ಲಿ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

1) "ದೇವದುರ್ಗ ತಾಲ್ಲೂಕ ಹಿರೇಕೂಡ್ಲಗಿ ಗ್ರಾಮದಲ್ಲಿ ಸರ್ವ ಶಿಕ್ಷಣ ಅಭಿಯಾನದಲ್ಲಿ ಶಿಕ್ಷಕಿಯಂತ ಕೆಲಸ ಮಾಡುತ್ತಿದ್ದ ಶ್ರೀಮತಿ ಮಲ್ಲಮ್ಮ ಸಾ: ಖಾನಾಪೂರ ಗ್ರಾಮ, ಇವರಿಗೆ ನೀವು ಸಿ.ಪಿ.ಸಿ.–80 ಗೋಪಾಲ, ಲೈಂಗಿಕ ಕಿರುಕುಳವನ್ನು ಕೊಟ್ಟಿದ್ದರಿಂದ ಅವಳು ಜೀವನದಲ್ಲಿ ಜಿಗುಪ್ಸೆಗೊಂಡು ಕುಡಿಯುವ ನೀರಿನ ಬಾವಿಯಲ್ಲಿ ಬಿದ್ದು ಆತ್ಮಹತ್ಯೆ ಮಾಡಿಕೊಂಡಿದ್ದು, ಈ ಘಟನೆಗೆ ನೀವೇ ಕಾರಣಕರ್ತರಾಗಿರುತ್ತೀರಿ.
2) ಶ್ರೀಮತಿ ಮಲ್ಲಮ್ಮ ಇವಳಿಗೆ ಲೈಂಗಿಕ ಕಿರುಕುಳ ಕೊಡಲು ನೀವು ಸಿಪಿಸಿ–13, ಹನುಮಂತ, ಸಿ.ಪಿ.ಸಿ.–80 ಗೋಪಾಲ, ರವರಿಗೆ ಪ್ರಚೋದನೆ ಮಾಡಿ ಸಹಕರಿಸಿ ಘೋರ ದುರ್ನಡತೆ ಪ್ರದರ್ಶಿಸಿದ್ದೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿಲ್ಲವೆಂದು ಸಲ್ಲಿಸಿದ ವರದಿಯನ್ನು ಶಿಸ್ತುಪ್ರಾಧಿಕಾರವು ಒಪ್ಪದೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ರಾಯಚೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 07–03–2008ರ ಆದೇಶದಲ್ಲಿ ಅರ್ಜಿದಾರರ ಮುಂದಿನ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಮುಂದೂಡಲಾಗಿದೆ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಸೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ:13–11–2008ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಹೊಸ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ದುರ್ನಡತೆ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 27 ಪೊಸಿಅ 2009 ಬೆಂಗಳೂರು, ದಿನಾಂಕ: 29ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಹನುಮಂತ, ಸಿ.ಪಿ.ಸಿ., ನೇತಾಜಿ ಪೊಲೀಸ್ ಠಾಣೆ, ರಾಯಚೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1854

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಚ್.ಎಸ್. ಪರಮೇಶ್ವರ, ಪೊಲೀಸ್ ಇನ್ಸ್‌ಪೆಕ್ಟರ್, ಬಸವೇಶ್ವರ ನಗರ ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ: ಅಪೀಲು(6)63/2006–07 ಓಬಿ:12/2008–09 ದಿನಾಂಕ: 03–05–2008.
2) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ:30–06–08
3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)16/2009–10 ದಿನಾಂಕ: 11–06–2009

**ಪ್ರಸ್ತಾವನೆ:**

ಶ್ರೀ ಎಚ್.ಎಸ್. ಪರಮೇಶ್ವರ, ಪೊಲೀಸ್ ಇನ್ಸ್‌ಪೆಕ್ಟರ್, ಬಸವೇಶ್ವರ ನಗರ ಪೊಲೀಸ್ ಠಾಣೆ, ಬೆಂಗಳೂರು, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಸಿಂಧನೂರು ನಗರ ಪೊಲೀಸ್ ಠಾಣೆಯಲ್ಲಿ ಪೊಲೀಸ್ ಸಬ್–ಇನ್ಸ್‌ಪೆಕ್ಟರ್, ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ಘೋರ ನಿರ್ಲಕ್ಷತೆ ಮತ್ತು ದುರ್ನಡತೆಯನ್ನು ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7 ರಡಿಯಲ್ಲಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ:**

> "ಶ್ರೀ ಎಚ್.ಎಸ್. ಪರಮೇಶ್ವರಪ್ಪ, ಪಿ.ಐ., ಹೆಚ್ ಅಂಡ್ ಬಿ, ಸಿ.ಓ.ಡಿ., ಬೆಂಗಳೂರು ಆದ ನೀವು ಸಿಂಧನೂರು ನಗರ ಪೊಲೀಸ್ ಠಾಣೆ, ರಾಯಚೂರು ಜಿಲ್ಲೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಸಿಂಧನೂರು ಪೊಲೀಸ್ ಠಾಣೆಯ ಮೊ.ನಂ.107/2004 ಕಲಂ 457–380 ಐ.ಪಿ.ಸಿ. ಪ್ರಕರಣದ ತನಿಖೆಗೆ ಗಂಗಾವತಿ ತಾಲ್ಲೂಕು ವಡ್ಡರಹಟ್ಟಿ ಕ್ಯಾಂಪಿಗೆ ಹೋಗದೆ ದಿ: 21–09–2004 ರಂದು ಸಿಂಧನೂರು ಪೊಲೀಸ್ ಠಾಣೆಯಲ್ಲಿಯೇ ಕುಳಿತುಕೊಂಡು ಜಪ್ತಿ ಪಂಚನಾಮೆಯನ್ನು ಬರೆದು ಪಂಚರ ಸಹಿಯನ್ನು ಪಡೆದುಕೊಂಡು ನಿಮ್ಮ ಕರ್ತವ್ಯದಲ್ಲಿ ನಿರ್ಲಕ್ಷತೆಯನ್ನು ಪ್ರದರ್ಶಿಸಿರುತ್ತೀರಿ. ನೀವು ಪಡೆದ ಪಂಚರ ಹೇಳಿಕೆ ಮತ್ತು ಪೊಲೀಸರು ನೀಡಿದ ಹೇಳಿಕೆಗಳು ಒಂದಕ್ಕೊಂದು ಪೂರಕವಾಗುವುದಿಲ್ಲ ಹಾಗೂ ತಾಳೆಯಾಗುವುದಿಲ್ಲ ಈ ಎಲ್ಲಾ ನಿರ್ಲಕ್ಷತೆಯಿಂದಾಗಿ ಈ ಪ್ರಕರಣವು ನ್ಯಾಯಾಲಯದಲ್ಲಿ ಬಿಡುಗಡೆಯಾಗಲು ಕಾರಣವಾಗಿರುತ್ತದೆ. ಈ ರೀತಿಯಾಗಿ ನೀವು ನಿಮ್ಮ ಕರ್ತವ್ಯದಲ್ಲಿ ಘೋರ ನಿರ್ಲಕ್ಷತೆ ಮತ್ತು ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:03–05–2008ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಭವಿಷ್ಯದ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಒಂದು ವರ್ಷದ ಅವಧಿಗೆ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 61 ಪೊಸಿಅ 2009 ಬೆಂಗಳೂರು, ದಿನಾಂಕ: 3ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಚ್.ಎಸ್. ಪರಮೇಶ್ವರ, ಪೊಲೀಸ್ ಇನ್ಸ್‌ಪೆಕ್ಟರ್, ಬಸವೇಶ್ವರ ನಗರ ಪೊಲೀಸ್ ಠಾಣೆ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1855

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಟಿ.ಈ. ಸುರೇಶ್, ಮಾಜಿ ಪಿ.ಸಿ., ಕುಶಾಲನಗರ ಪೊಲೀಸ್ ಠಾಣೆ, ಕೊಡಗು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಕೊಡಗು ಜಿಲ್ಲೆ, ಇವರ ಆದೇಶ ಸಂಖ್ಯೆ: ಡಿಇ/4/07–08 ಓ.ಬಿ:25/08–09 ದಿನಾಂಕ: 12–06–2008
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ: ಅಪೀಲು/38/2008–09 ಓ.ಬಿ:40/2008–09 ದಿನಾಂಕ: 17–01–2009 ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 03–03–2009

3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ
4) ಸಂಖ್ಯೆ:ಅಪೀಲು(2)2/2009–10 ದಿನಾಂಕ: 23–05–2009

**ಪ್ರಸ್ತಾವನೆ:**

ಶ್ರೀ ಟಿ.ಈ. ಸುರೇಶ್, ಇವರು ಕುಶಾಲನಗರ ಪೊಲೀಸ್ ಠಾಣೆಯಲ್ಲಿ ಪೊಲೀಸ್ ಕಾನ್ಸ್‌ಟೇಬಲ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಿ, ಅಶಿಸ್ತು ಹಾಗೂ ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ:**

> "ಶ್ರೀ ಟಿ.ಈ.ಸುರೇಶ್, ಸಿ.ಪಿ.ಸಿ–82, ಮಡಿಕೇರಿ ಪೊಲೀಸ್ ನಗರ ಠಾಣೆ, ಆದ ನೀವು ಕುಶಾಲನಗರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ದಿ:27–06–2007 ರಂದು ಠಾಣಾ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿದ್ದು, ಗೈರುಹಾಜರಿ ಅವಧಿಯಲ್ಲಿ ಅನ್ಯ ಮಹಿಳೆಯರೊಂದಿಗೆ ಒಡನಾಟ ಇಟ್ಟುಕೊಂಡು, ನಿಮ್ಮ ಪತ್ನಿಯಾದ ಶ್ರೀಮತಿ ಕವಿತಾರೊಂದಿಗೆ ವಿನಾಕಾರಣ ಜಗಳ ತೆಗೆದು, ಅವಾಚ್ಯ ಶಬ್ದಗಳಿಂದ ಬೈದು ಮಾನಸಿಕ ಹಾಗೂ ದೈಹಿಕ ಹಿಂಸೆ ನೀಡಿ ಪತ್ನಿ ಮತ್ತು ಮಕ್ಕಳಿಗೆ ಕೊಲೆ ಬೆದರಿಕೆ ಹಾಕಿರುವುದಾಗಿಯೂ ಈ ಘಟನೆಯಿಂದ ನಿಮ್ಮ ಪತ್ನಿ ಶ್ರೀಮತಿ ಕವಿತಾರವರು ಪ್ರಾಣಭಯದಿಂದ ಹಾಗೂ ಅಸಹಾಯಕತೆಯಿಂದ ಕುಶಾಲನಗರ ಪೊಲೀಸ್ ಠಾಣೆಯಲ್ಲಿ ದಿ:03–08–2007 ರಂದು ನೀಡಿದ ದೂರಿನ ಮೇರೆಗೆ ನಿಮ್ಮ ವಿರುದ್ಧ ಮೊ.ಸಂ.106/2007 ಕಲಂ 498(ಎ) 506 ಐಪಿಸಿ ಮೇರೆಗೆ ಪ್ರಕರಣ ದಾಖಲಾಗಿರುವುದಾಗಿದೆ. ನೀವು ಶಿಸ್ತಿನ ಇಲಾಖೆಯಲ್ಲಿ ಜವಾಬ್ದಾರಿಯುತ ನೌಕರನಾಗಿದ್ದು, ಇಲಾಖೆಯ ನೀತಿ ನಿಯಮಗಳಿಗೆ ವಿರುದ್ಧವಾಗಿ ನಡೆದು ಕೊಂಡು, ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುವುದಲ್ಲದೆ, ನಿಮ್ಮ ಪತ್ನಿಯೊಂದಿಗೆ ಅನುಚಿತವಾಗಿ ವರ್ತಿಸಿ, ದೈಹಿಕ ಹಾಗೂ ಮಾನಸಿಕ ಹಿಂಸೆ ನೀಡಿ, ಕೊಲೆ ಬೆದರಿಕೆ ಹಾಕಿ, ನಿಮ್ಮ ವಿರುದ್ಧ ಕ್ರಿಮಿನಲ್ ಕೇಸು ದಾಖಲಾಗಲು ಕಾರಣಕರ್ತರಾಗಿ, ಇಲಾಖೆ ಬಗ್ಗೆ ಸಾರ್ವಜನಿಕರಲ್ಲಿ ಕೆಟ್ಟ ಅಭಿಪ್ರಾಯ ಬರುವಂತೆ ನಡೆದುಕೊಂಡು ಅಶಿಸ್ತು ಮತ್ತು ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ ಎಂಬುದು ನಿಮ್ಮ ಮೇಲಿನ ಆರೋಪವಾಗಿರುತ್ತದೆ. "

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಕೊಡಗು ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 12–06–2008ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸಿದ್ದಾರೆ, ಗೈರುಹಾಜರಾದ ಅವಧಿಯನ್ನು ವೇತನ ರಹಿತ ರಜೆಯೆಂದು ಹಾಗೂ ದಿನಾಂಕ: 07–08–2007 ರಿಂದ 26–10–2007ರ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿ ಆದೇಶಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಸೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ:17–01–2009ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನಿಯ ಕಾರಣಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 64 ಪೊಸಿಅ 2009 ಬೆಂಗಳೂರು, ದಿನಾಂಕ: 3ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಟಿ.ಈ. ಸುರೇಶ್, ಮಾಜಿ ಪಿ.ಸಿ., ಕುಶಾಲನಗರ ಪೊಲೀಸ್ ಠಾಣೆ, ಕೊಡಗು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1856

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಚ್. ಕೃಷ್ಣಶೆಟ್ಟಿ, ಸಿ.ಪಿ.ಸಿ.–633, ಶ್ರೀರಂಗಪಟ್ಟಣ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ(2)ಡಿಇ/20/2005–06 ಓ.ಬಿ:186/07–08 ದಿ:12–09–2007

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ:ಅಪೀಲು:31/2008–09 ಓ.ಬಿ:36/2008–09 ದಿ:03–12–2008

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:19–01–2009

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)112/2008–09 ದಿನಾಂಕ:08–05–2009

**ಪ್ರಸ್ತಾವನೆ:–**

ಶ್ರೀ ಎಚ್. ಕೃಷ್ಣಶೆಟ್ಟಿ, ಸಿ.ಪಿ.ಸಿ.–633, ಶ್ರೀರಂಗಪಟ್ಟಣ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಮದ್ದೂರು ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಅಧಿಕಾರ ದುರುಪಯೋಗ ಹಾಗೂ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾದ ಕಾರಣಗಳಿಗಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷರೋಪಣೆ:**

1. "ನಿಮಗೆ ದಿ:01–08–05 ರಂದು ಕ್ರಿಮಿನಲ್ ಪ್ರಕರಣ ಗಳಲ್ಲಿ ಆಸ್ಪತ್ರೆಯಿಂದ ಗಾಯದ ಪ್ರಮಾಣ ಪತ್ರ ಪಡೆದುಕೊಂಡು ಬರುವ ಕರ್ತವ್ಯಕ್ಕೆ ನಿಯೋಜಿಸಿದ್ದು, ನೀವು ನಿಯೋಜಿಸಿದ ಸರ್ಕಾರಿ ಕೆಲಸ ಮಾಡದೆ ಅಂದು ರಾತ್ರಿ 12–30 ಗಂಟೆಯಲ್ಲಿ ನೀವು ಮತ್ತು ನಾಗರಾಜು ಎಂಬುವರ ಜೊತೆಗೂಡಿ ಮದ್ದೂರು ಕೈಗಾರಿಕಾ ಪ್ರದೇಶದಲ್ಲಿರುವ ನೀಲಂ ಗುಪ್ತರವರ ಗ್ರಾನೈಟ್ ಫ್ಯಾಕ್ಟರಿಯಲ್ಲಿ ಕಳ್ಳತನ ಮಾಡಲು ಕ್ವಾಲೀಸ್ ಕಾರ್ ನಂ. ಕೆ–02/ಪಿ–1975ರಲ್ಲಿ ಬಂದಾಗ ಫ್ಯಾಕ್ಟರಿಯ ಸೆಕ್ಯೂರಿಟಿ ಗಾರ್ಡ್ ಮತ್ತು ಸಿಬ್ಬಂದಿಗೆ ಸಿಕ್ಕಿ ಬಿದ್ದಾಗ ನೀವು ಪೊಲೀಸ್ ಎಂದು ಹೇಳಿಕೊಂಡು ಹಾಗೂ ನಾಗರಾಜು ಎಂಬುವನನ್ನು ಸಹ ಕಾನೂನಿನ ಪ್ರಕಾರ ಕ್ರಮಕೈಗೊಳ್ಳದೆ ಇರುವಂತೆ ಪಾರು ಮಾಡಲು ಅಧಿಕಾರವನ್ನು ದುರುಪಯೋಗ ಪಡಿಸಿಕೊಂಡಿರುತ್ತೀರಿ.
2. ನೀವು ಈ ಅಕ್ರಮ ಚಟುವಟಿಕೆಯಲ್ಲಿ ಭಾಗಿಯಾಗಿರುವ ಆರೋಪವಿದ್ದು, ದಿ:01–08–05ರ ಬೆಳಿಗ್ಗೆ 04–00 ಗಂಟೆಯಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 12–09–07ರ ಆದೇಶದಲ್ಲಿ "ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಮೂರು ವರ್ಷಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ತಡೆಹಿಡಿಯುವ ದಂಡನೆಯನ್ನು ವಿಧಿಸಿದ್ದಾರೆ. ದಿ:01–08–05 ರಿಂದ 16–11–05ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ."

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:03–12–2008ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇಲಾಖಾ ವಿಚಾರಣೆಯಲ್ಲಿ ಇವರ ವಿರುದ್ಧದ ಆರೋಪವು ಸಾಬೀತಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 24 ಪೊಸಿಅ 2009 ಬೆಂಗಳೂರು, ದಿನಾಂಕ: 7ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೃಷ್ಣಶೆಟ್ಟಿ, ಸಿ.ಪಿ.ಸಿ.–633, ಶ್ರೀರಂಗಪಟ್ಟಣ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1857 **ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಸ್. ಮಹದೇವಯ್ಯ, ಸಿ.ಎಚ್.ಸಿ.–212, ಕೆ.ಎಂ. ದೊಡ್ಡಿ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮಂಡ್ಯ, ಇವರ ಆದೇಶ ಸಂಖ್ಯೆ: ಸಿಬ್ಬಂದಿ(2)/ಪಿಆರ್/03/2008–09 ಓ.ಬಿ:69/2008–09 ದಿ:16–05–2008
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ: ಅಪೀಲು:22/2008–09 ಓ.ಬಿ:24/2008–09 ದಿ:26–09–2008
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:31–01–2009
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)117/2008–09 ದಿನಾಂಕ:08–05–2009

**ಪ್ರಸ್ತಾವನೆ:**

ಶ್ರೀ ಎಸ್.ಮಹದೇವಯ್ಯ, ಸಿ.ಎಚ್.ಸಿ.–212, ಕೆ.ಎಂ. ದೊಡ್ಡಿ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಕೊಪ್ಪ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ, ಬೇಜವಾಬ್ದಾರಿತನ ಹಾಗೂ ಅಶಿಸ್ತು ಪ್ರದರ್ಶಿಸಿದ ಕಾರಣಗಳಿಗಾಗಿ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7 ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷರೋಪಣೆ:**

"ನೀವು ಸಿ.ಎಚ್.ಸಿ.–212, ಆಗಿ ಕೊಪ್ಪ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿ:04–03–2008 ರಂದು ಕೊಪ್ಪ ಪೊಲೀಸ್ ಠಾಣೆಯ ಉಸ್ತುವಾರಿಯಲ್ಲಿದ್ದು ಡಿ. ಹೊಸಹಳ್ಳಿ ಗ್ರಾಮದ ಶ್ರೀಮತಿ ಸುಲೋಚನಾ ಕೋಂ ಪ್ರಕಾಶ ಎಂಬುವವರು ನೀಡಿದ ಪಿರ್ಯಾದನ್ನು ಎನ್.ಸಿ.ಆರ್.ನಂ. 42:08ರಲ್ಲಿ ದಾಖಲಿಸಿ ಕೊಂಡು ಸದರಿ ಅರ್ಜಿಯ ಬಗ್ಗೆ ಸ್ಥಳಕ್ಕೆ ಭೇಟಿನೀಡದೆ ಹಾಗೂ ಪ್ರತ್ಯಕ್ಷ ಸಾಕ್ಷಿದಾರರನ್ನು ವಿಚಾರಣೆಗೊಳಪಡಿಸದೆ ಏಕಪಕ್ಷೀಯವಾಗಿ ವಿಚಾರಣೆ ನಡೆಸಿ ಎದುರು ಅರ್ಜಿದಾರರಾದ ಕೃಷ್ಣೇಗೌಡ, ಶೇಖರ ಮತ್ತು ಪ್ರಕಾಶ ರವರುಗಳಿಗೆ ಬೈಯ್ದು ಶೇಖರ ಎಂಬುವವರಿಗೆ ಹೊಡೆಯುವುದಾಗಿ ಬೆದರಿಸಿ, ಅರ್ಜಿದಾರಳಾದ ಶ್ರೀಮತಿ ಸುಲೋಚನಾ ರವರ ಕಾಲಿಗೆ ಬೀಳುವಂತೆ ಒತ್ತಾಯಪಡಿಸಿ ನೀವು ಎದುರು ಅರ್ಜಿದಾರರುಗಳಾದ ಕೃಷ್ಣೇಗೌಡ, ಶೇಖರ ಎಂಬುವವರಿಂದ ಖಾಲಿ ನೋಟೀಸ್‌ಗೆ ಸಹಿ ಹಾಕಿಸಿಕೊಂಡಿರುತ್ತೀರಿ. ಇದರಿಂದಾಗಿ ನೀವು ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ, ಬೇಜವಾಬ್ದಾರಿತನ ಹಾಗೂ ಅಶಿಸ್ತು ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮಂಡ್ಯ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 16–05–08ರ ಆದೇಶದಲ್ಲಿ "ಅರ್ಜಿದಾರರರಿಗೆ ತೀವ್ರವಾಗಿ ಎಚ್ಚರಿಕೆ ನೀಡಿ ದಿ:11–03–08 ರಿಂದ 24–03–08ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿದ್ದಾರೆ."

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:26–09–08ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ

ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 37 ಪೊಸಿಅ 2009 ಬೆಂಗಳೂರು, ದಿನಾಂಕ: 8ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಮಹದೇವಯ್ಯ, ಸಿ.ಎಚ್.ಸಿ.–212, ಕೆ.ಎಂ. ದೊಡ್ಡಿ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1858

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಂ. ಜಯಗೋಪಾಲ್, ಪಿ.ಐ., ಟಿ.ಟಿ.ಐ., ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ: ಡಿಇ:(2)ಆರ್7/ಸಿಓಪಿ/5/07–08 ದಿನಾಂಕ: 28–12–2007
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ:ಸಿಬಿ(8) 104/2007–08 ದಿ:11–01–2009
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:09–02–2009
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)109/2008–09 ದಿ:15–05–2009

**ಪ್ರಸ್ತಾವನೆ:**

ಶ್ರೀ ಎಂ. ಜಯಗೋಪಾಲ್, ಪಿ.ಐ., ಟಿ.ಟಿ.ಐ., ಬೆಂಗಳೂರು, ಇವರು ಶ್ರೀರಾಂಪುರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯಲೋಪದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷರೋಪಣೆ:**

> **"**ಶ್ರೀ ಎಂ. ಜೈಗೋಪಾಲ್, ಪೊಲೀಸ್ ಇನ್ಸ್‌ಪೆಕ್ಟರ್, ಕಾಮಾಕ್ಷಿಪಾಳ್ಯ ಸಂಚಾರ ಪೊಲೀಸ್ ಠಾಣೆ, ಬೆಂಗಳೂರು ನಗರ, ಆದ ನೀವು ಈ ಹಿಂದೆ ಶ್ರೀರಾಂಪುರ ಪೊಲೀಸ್ ಠಾಣೆ, ಬೆಂಗಳೂರು ನಗರ, ಇಲ್ಲಿ ಠಾಣಾಧಿಕಾರಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಶ್ರೀ ಗೋಪಿನಾಥ್ ರವರ ಫಿರ್ಯಾದಿನ ಮೇರೆಗೆ ಮೊ.ಸಂ.173/06 ಕಲಂ 341, 323, 324, 504, ರೆ/ವಿ 34 ಐ.ಪಿ.ಸಿ. ರೀತ್ಯಾ ಪ್ರಕರಣವನ್ನು ದಾಖಲಾಗಿರುತ್ತದೆ. ಆ ಪ್ರಕರಣದಲ್ಲಿ ಆರೋಪಿ ಶ್ರೀಮತಿ ನಿರ್ಮಲ, ರವರನ್ನು ದಸ್ತಗಿರಿ ಮಾಡದೆ ಆರೋಪಿ ತಲೆಮರೆಸಿಕೊಂಡಿರುವುದಾಗಿ ತಿಳಿಸಿ ದೋಷಾರೋಪಣಾ ಪಟ್ಟಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿರುತ್ತೀರಿ. ಈ ಪ್ರಕರಣದಲ್ಲಿ ದೋಷಾರೋಪಣಾ ಪತ್ರವನ್ನು ಕೂಲಂಕುಷವಾಗಿ ಪರಿಶೀಲಿಸದೆ ತನಿಖಾಧಿಕಾರಿಯಾದ ಪಿ.ಎಸ್.ಐ., ಆದ ಶ್ರೀ ಸಿದ್ದರಾಜು, ರವರಿಗೆ ಸೂಕ್ತ ನಿರ್ದೇಶನ ನೀಡದೆ ನಿಮ್ಮ ಕರ್ತವ್ಯದಲ್ಲಿ ಲೋಪವೆಸಗಿರುವುದು ದೃಢಪಟ್ಟಿರುತ್ತದೆ.**"**

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 28–12–2007ರ ಆದೇಶದಲ್ಲಿ **"**ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಎರಡು ವರ್ಷಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಮುಂದೂಡುವ ದಂಡನೆಯನ್ನು ವಿಧಿಸಿರುತ್ತಾರೆ.**"**

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 11–07–09ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 47 ಪೊಸಿಅ 2009 ಬೆಂಗಳೂರು, ದಿನಾಂಕ: 10ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ. ಜಯಗೋಪಾಲ್, ಪಿ.ಐ., ಟಿ.ಟಿ.ಐ., ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1859 **ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎ. ಮಾರಪ್ಪ, ಪಿ.ಎಸ್.ಐ., ದೇವನಹಳ್ಳಿ, ಪೊಲೀಸ್ ಠಾಣೆ, ಬೆಂಗಳೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ:ಸಿಬ್ಬಂದಿ/211/2003–04 ದಿ:29–09–2006
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ:ಅಪೀಲು(6) 56/2006–07, ಓ.ಬಿ:20/2007–08 ದಿನಾಂಕ:16–06–2007
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:16–10–2007
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)85/2007–08 ದಿ:07–01–2008 & 01–04–2008
5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ 99 ಸಿಎನ್‌ಎಸ್ 2008 ದಿನಾಂಕ:15–06–2009

**ಪ್ರಸ್ತಾವನೆ:**

ಶ್ರೀ ಎ. ಮಾರಪ್ಪ, ಪಿ.ಎಸ್.ಐ., ದೇವನಹಳ್ಳಿ, ಪೊಲೀಸ್ ಠಾಣೆ, ಬೆಂಗಳೂರು ಇವರು ಹಾಸನ ಸಂಚಾರಿ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ನಿರ್ಲಕ್ಷತೆ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇನ್ನುಳಿದ ಸಿಬ್ಬಂದಿಗಳೊಂದಿಗೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ಮತ್ತು 8 ರಡಿ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷರೋಪಣೆ:**

1) ಹಾಸನ ಸಂಚಾರಿ ಪೊಲೀಸ್ ಠಾಣೆಗೆ ನೀಡಲಾದ ಕ್ರೇನ್ (ಟೈಗರ್)ನ್ನು ಉಪಯೋಗಿಸಿ ಸಂಚಾರಿ ಠಾಣೆಗೆ ಎಳೆತಂದ ಹಾಗೂ ಪ್ರಕರಣಗಳಲ್ಲಿ ಒಳಗೊಂಡ ವಾಹನಗಳ ಮಾಲೀಕರುಗಳಿಂದ ಟೈಗರ್ ಛಾರ್ಜಸ್ ಎಂದು ಹಾಗೂ ದಂಡವೆಂದು ಲಕ್ಷಾಂತರ ಹಣವನ್ನು ವಸೂಲು ಮಾಡಿರುವುದು.
2) ಸದರಿ ವಾಹನಗಳ ಮಾಲೀಕರಿಂದ ಹಣ ವಸೂಲು ಮಾಡಲು ಇಲಾಖೆಯಿಂದ ಅಥವಾ ಸರ್ಕಾರದ ಅನುಮತಿಯಿಲ್ಲದೆ ಅನಧಿಕೃತವಾಗಿ ರಶೀತಿಗಳನ್ನು ಪ್ರಿಂಟ್‌ಮಾಡಿಸಿಕೊಂಡು ಅವ್ಯವಹಾರ ನಡೆಸಿರುವುದು.
3) ಈ ರೀತಿ ಅಕ್ರಮವಾಗಿ ವಸೂಲುಮಾಡಿದ ಲಕ್ಷಾಂತರ ರೂಪಾಯಿಗಳಿಗೆ ಸಮರ್ಪಕವಾಗಿ ಲೆಕ್ಕಪತ್ರ ನಿರ್ವಹಿಸದೆ ಮನಸ್ಸಿಗೆ ತೋಚಿದಂತೆ ಖರ್ಚುಮಾಡಿ ಆ ಮೂಲಕ ಸರ್ಕಾರಕ್ಕೆ ವಂಚನೆ, ಸದರಿ ಹಣದ ದುರುಪಯೋಗ, ಅಧಿಕಾರ ದುರುಪಯೋಗ, ಕರ್ತವ್ಯದಲ್ಲಿ ಬೇಜವಾಬ್ದಾರಿತನ, ಕರ್ತವ್ಯ ನಿರ್ಲಕ್ಷ್ಯತೆ ಹಾಗೂ ಕರ್ತವ್ಯಲೋಪವೆಸಗಿರುವ ಆರೋಪಗಳು.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ:29–09–06ರ ಆದೇಶದಲ್ಲಿ "ಅರ್ಜಿದಾರರ ವೇತನವನ್ನು ಪೊಲೀಸ್ ಸಬ್–ಇನ್ಸ್‌ಪೆಕ್ಟರ್ ಹುದ್ದೆಯ ವೇತನದ ಕನಿಷ್ಠ ಹಂತಿಕ್ಕೆ ಇಳಿಸಿ, ಈ ಹಂತದಿಂದ ಹೊಸದಾಗಿ ವಾರ್ಷಿಕ ವೇತನ ಬಡ್ತಿಯನ್ನು ಗಳಿಸುವ ದಂಡನೆಯನ್ನು ವಿಧಿಸಿದ್ದಾರೆ. ದಿನಾಂಕ:25-11–2003 ರಿಂದ 26–02–2004ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದ್ದಾರೆ."

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ: 16–06–2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಶಿಸ್ತುಪ್ರಾಧಿಕಾರದ ದಂಡನಾದೇಶವು ಕರ್ನಾಟಕ ನಾಗರಿಕ ಸೇವಾನಿಯಮಾವಳಿಯ ನಿಯಮ 59(1)(ಬಿ) ಅನ್ವಯ ದೋಷಪೂರಿತವಾಗಿರುವುದನ್ನು ಗಮನಿಸಿ ಪರಿಷ್ಕರಣ ಮೇಲ್ಮನವಿಯನ್ನು ಭಾಗಶ: ಪುರಸ್ಕರಿಸಲು ತೀರ್ಮಾನಿಸಿ, ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 50 ಪೊಸಿಅ 2008 ಬೆಂಗಳೂರು, ದಿನಾಂಕ: 6ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎ. ಮಾರಪ್ಪ, ಪಿ.ಎಸ್.ಐ., ದೇವನಹಳ್ಳಿ, ಪೊಲೀಸ್ ಠಾಣೆ, ಇವರಿಗೆ ಶಿಸ್ತುಪ್ರಾಧಿಕಾರ ವಿಧಿಸಿದ ದಂಡನಾದೇಶವನ್ನು ಈ ಕೆಳಕಂಡಂತೆ ಭಾಗಶ: ಮಾರ್ಪಡಿಸಿ, ಆದೇಶಿಸಿದೆ.

(i) ಪೊಲೀಸ್ ಸಬ್–ಇನ್ಸ್‌ಪೆಕ್ಟರ್ ಹುದ್ದೆಯ ವೇತನ ಶ್ರೇಣಿಯ ಕನಿಷ್ಠ ವೇತನ ರೂ.10,000/–ಗಳಿಗೆ ಎರಡು ವರ್ಷಗಳ ಕಾಲ ಸಂಚಿತ ಪರಿಣಾಮ ರಹಿತವಾಗಿ ನಿಗದಿಪಡಿಸುವುದು.

(ii) ಈ ಎರಡು ವರ್ಷಗಳ ದಂಡನಾ ಅವಧಿಯಲ್ಲಿ ಯಾವುದೇ ವಾರ್ಷಿಕ ವೇತನ ಬಡ್ತಿಯಾಗಲಿ ಅಥವಾ ಪದೋನ್ನತಿಯಾಗಲಿ ಪಡೆಯಲು ಅರ್ಹರಿರುವುದಿಲ್ಲ.

(iii) ದಂಡನಾವಧಿ ಎರಡು ವರ್ಷಗಳು ಪೂರ್ಣಗೊಂಡ ನಂತರ ಇವರ ವೇತನವನ್ನು ದಂಡನಾ ಅವಧಿಯ ಪೂರ್ವದಲ್ಲಿ ಪಡೆಯುತ್ತಿದ್ದ ಮೂಲ ವೇತನ ಹಾಗೂ ತಡೆಹಿಡಿಯಲಾಗಿದ್ದ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಸೇರಿಸಿ ಕಾಲ್ಪನಿಕವಾಗಿ ಮರುನಿಗದಿಗೊಳಿಸುವುದು.

(iv) ದಿ:25–11–2003 ರಿಂದ 26–02–2004ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1860

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ಕಾರ್ಮಿಕ ಸಚಿವಾಲಯ**

**ವಿಷಯ:** ಕಾರಾವಿ ನಿಗಮದಲ್ಲಿ ನಿಯೋಜನೆ ಮೇಲೆ ಸೇವೆ ಸಲ್ಲಿಸುತ್ತಿದ್ದ ಕಾರಾವಿ ಯೋಜನೆ (ವೈದ್ಯಕೀಯ) ಸೇವೆಗಳು ಇಲಾಖೆಯ ಡಾ:ಪಿ.ಶಶಿಕಲಾ, ಕಿರಿಯ ತಜ್ಞರು ಇವರ ಸೇವೆಯನ್ನು ನಿಗಮದಲ್ಲಿ ವಿಲೀನಗೊಳಿಸುವ ಬಗ್ಗೆ.

**ಓದಲಾಗಿದೆ:** 1) ಮಾನ್ಯ ಕಾರ್ಮಿಕ ಸಚಿವರ ಟಿಪ್ಪಣಿ ಸಂಖ್ಯೆ.ಕಾಸ/1169/09, ದಿನಾಂಕ:21–07–2009.

2) ವೈದ್ಯಕೀಯ ಆಯುಕ್ತರು, ಕಾರಾವಿ ನಿಗಮ, ನವದೆಹಲಿ ಇವರ ಪತ್ರ ಸಂಖ್ಯೆ.ಂ–37(18)1/03.Med.IV, ದಿನಾಂಕ:03–06–2005.

3) ವೈದ್ಯಕೀಯ ಆಯುಕ್ತರು, ಕಾರಾವಿ ನಿಗಮ, ನವದೆಹಲಿ ಇವರ ಪತ್ರ ಸಂಖ್ಯೆ.ಂ–37(18)1/03OM(HQ) ದಿನಾಂಕ:20–12–2005.

**ಪ್ರಸ್ತಾವನೆ:**

ಕಾ.ರಾ.ವಿ. ಆಸ್ಪತ್ರೆ, ರಾಜಾಜಿನಗರ, ಬೆಂಗಳೂರು ಇದನ್ನು ಮಾದರಿ ಆಸ್ಪತ್ರೆಯನ್ನಾಗಿ ಪರಿವರ್ತಿಸುವ ಸಲುವಾಗಿ ಸರ್ಕಾರಿ ಆದೇಶ ಸಂಖ್ಯೆ.ಕಾಇ 157 ಎಲ್ಎಸ್ಐ 2001, ದಿನಾಂಕ:31–03–2003ರ ಮೂಲಕ ದಿನಾಂಕ:01–04–2003 ರಿಂದ ಜಾರಿಗೆ ಬರುವಂತೆ ಸದರಿ ಆಸ್ಪತ್ರೆ, ಸಿಬ್ಬಂದಿ, ಕಟ್ಟಡ, ಪೀಠೋಪಕರಣಗಳು ಮತ್ತು ವೈದ್ಯಕೀಯ ಉಪಕರಣಗಳೊಂದಿಗೆ

ಕಾರಾವಿ ನಿಗಮಕ್ಕೆ ಹಸ್ತಾಂತರಿಸಲಾಗಿತ್ತು. ಹಸ್ತಾಂತರಿಸಲಾದ ಸಿಬ್ಬಂದಿಯನ್ನು ವಿಲೀನತೆಯ ಆಯ್ಕೆಯೊಂದಿಗೆ ಮೊದಲಿಗೆ ಮೂರು ವರ್ಷಗಳ ಅವಧಿಗೆ ನಿಯೋಜನೆ ಮೇರೆಗೆ ನಿಗಮಕ್ಕೆ ನೀಡಲಾಗಿತ್ತು. ಈ ಸಿಬ್ಬಂದಿಯ ನಿಯೋಜನೆಯ ಅವಧಿಯು ದಿನಾಂಕ:31–03–2006ರಂದು ಮುಕ್ತಾಯಗೊಂಡಿರುತ್ತದೆ.

ವೈದ್ಯಕೀಯ ಆಯುಕ್ತರು, ಕಾರಾವಿ ನಿಗಮ, ನವದೆಹಲಿ ಇವರು ಮೇಲೆ ಓದಲಾದ (2) ಮತ್ತು (3)ರ ಪತ್ರಗಳಲ್ಲಿ ನಿಯೋಜನೆ ಮೇಲೆ ಕಾರ್ಯ ನಿರ್ವಹಿಸುತ್ತಿರುವ ಸಿಬ್ಬಂದಿಯನ್ನು ಕಾರಾವಿ ನಿಗಮದ ಸೇವೆಯಲ್ಲಿ ವಿಲೀನಗೊಳಿಸಲು ಕೋರಿರುತ್ತಾರೆ. ಹಾಗೂ ವಿಲೀನತೆಗೆ ಸಂಬಂಧಿಸಿದಂತೆ ನಿಗಮವು ವಿಧಿಸುವ ನಿಬಂಧನೆ ಮತ್ತು ಷರತ್ತುಗಳನ್ನು ಕಳುಹಿಸಿರುತ್ತಾರೆ.

ಕಾರಾವಿ ನಿಗಮದಲ್ಲಿ ನಿಯೋಜನೆ ಮೇಲೆ ಸೇವೆ ಸಲ್ಲಿಸುತ್ತಿರುವ ಕಾರಾವಿ ಯೋಜನೆ (ವೈದ್ಯಕೀಯ) ಸೇವೆಗಳು ಇಲಾಖೆಯ ಯಾವ ವೈದ್ಯಾಧಿಕಾರಿಗಳು ಹಾಗೂ ಸಿಬ್ಬಂದಿಗಳು ನಿಗಮದ ಸೇವೆಯಲ್ಲಿ ವಿಲೀನಗೊಳ್ಳಲು ಇಚ್ಛಿಸುತ್ತಾರೆಯೋ ಅಂತಹವರು ಇಚ್ಛಾ ಪತ್ರವನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು. ಆ ಸಂದರ್ಭದಲ್ಲಿ ಡಾ:ಪಿ.ಶಶಿಕಲಾ, ಕಿರಿಯ ತಜ್ಞರು, ಕಾರಾವಿ ನಿಗಮದಲ್ಲಿ ನಿಯೋಜನೆಯ ಮೇಲೆ ಸೇವೆ ಸಲ್ಲಿಸುತ್ತಿದ್ದು ಕಾರಾವಿ ನಿಗಮದ ಸೇವೆಯಲ್ಲಿ ವಿಲೀನಗೊಳ್ಳಲು ಇಚ್ಛಾ ಪತ್ರವನ್ನು ಸಲ್ಲಿಸಿದ್ದರು.

ತದನಂತರ ಇವರು ಕಾರಾವಿ ನಿಗಮದ ಸೇವೆಯಲ್ಲಿ ನಿಯೋಜನೆ ಮೇರೆಗೆ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಒಂದು ವರ್ಷದ ಅವಧಿಗೆ CORNEA sub speciality fellow ಪದವಿ ತರಬೇತಿ ಪಡೆಯಲು Minto Regional Institute of Opthalmology ಇಲ್ಲಿಗೆ ಆಯ್ಕೆಗೊಂಡಿದ್ದ ಕಾರಣ ಇವರನ್ನು ನಿಯೋಜನೆಯಿಂದ ಹಿಂಪಡೆದು ಸರ್ಕಾರದ ಆದೇಶ ಸಂಖ್ಯೆ.ಕಾಇ 471 ಎಲ್‌ಎಸ್‌ಐ 2008, ದಿನಾಂಕ:09–01–2009ರ ಮೂಲಕ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ಅಪೆಂಡಿಕ್ಸ್–II A ಪ್ರಕಾರ ಉನ್ನತ ವ್ಯಾಸಂಗಕ್ಕಾಗಿ ದಿನಾಂಕ:01–01–2009 ರಿಂದ 31–12–2009ರ ವರೆಗೆ ನಿಯೋಜಿಸಲಾಗಿದೆ.

ಈ ವೈದ್ಯಾಧಿಕಾರಿಯವರನ್ನು ದಿನಾಂಕ:31–12–2009ರ ತನಕ ವ್ಯಾಸಂಗದ ಮೇಲೆ ನಿಯೋಜಿಸಿದ್ದ ಕಾರಣ ಕಾರಾವಿ ನಿಗಮದ ಸೇವೆಯಲ್ಲಿ ನಿಯೋಜನೆ ಮೇಲೆ ಇರುವವರನ್ನು ನಿಗಮದಲ್ಲಿ ವಿಲೀಗೊಳಿಸುವ ಸಂಬಂಧ ಮುಂದುವರಿಸಲಾದ ಕಡತ ಸಂಖ್ಯೆ.ಕಾಇ 395 ಎಲ್‌ಎಸ್‌ಐ 2006ರಲ್ಲಿ ಇವರ ಹೆಸರನ್ನು ಕೈಬಿಡಲಾಗಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಮಾನ್ಯ ಕಾರ್ಮಿಕ ಸಚಿವರ ಟಿಪ್ಪಣಿಯಲ್ಲಿ ಡಾ:ಪಿ.ಶಶಿಕಲಾ, ಕಿರಿಯ ತಜ್ಞರು, ಇವರು ಕಾ.ರಾ.ವಿ. ನಿಗಮದ ಸೇವೆಯಲ್ಲಿ ನಿಯೋಜನೆ ಮೇಲೆ ಇದ್ದು ಆ ಸಂಧರ್ಬದಲ್ಲಿ ವಿಲೀನತೆಗೆ ಇಚ್ಛಾ ಪತ್ರವನ್ನು ಸಲ್ಲಿಸಿರುವ ಕಾರಣ ಇವರ ಸೇವೆಯನ್ನು ಕಾರಾವಿ ನಿಗಮದ ಸೇವೆಯಲ್ಲಿ ವಿಲೀನಗೊಳಿಸುವ ಬಗ್ಗೆ ಅಗತ್ಯ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು. ಆ ಪ್ರಕಾರ ಪ್ರಸ್ತಾವನೆಯನ್ನು ಪರಿಶೀಲಿಸಿ ಇವರ ಸೇವೆಯನ್ನು ಕಾರಾವಿ ನಿಗಮದಲ್ಲಿ ವಿಲೀನಗೊಳಿಸಲು ಉದ್ದೇಶಿಸಿ ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ.ಕಾಇ 286 ಎಲ್‌ಎಸ್‌ಐ 2009, ಬೆಂಗಳೂರು, ದಿನಾಂಕ: 7ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಡಾ:ಪಿ.ಶಶಿಕಲಾ, ಕಿರಿಯ ತಜ್ಞರು, ಕಾರ್ಮಿಕ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು ಇವರ ಸೇವೆಯನ್ನು ಕಾರ್ಮಿಕ ರಾಜ್ಯ ವಿಮಾ ನಿಗಮದ ಸೇವೆಯಲ್ಲಿ ವಿಲೀನಗೊಳಿಸಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳನ್ವಯ ಸರ್ಕಾರದ ಮಂಜೂರಾತಿ ನೀಡಲಾಗಿದೆ.

**ಷರತ್ತು ಮತ್ತು ನಿಭಂಧನೆಗಳು**

- ಕಾರಾವಿ ನಿಗಮದಲ್ಲಿ ವಿಲೀನಗೊಳ್ಳುವ ಸಿಬ್ಬಂದಿಗಳು ರಾಜ್ಯ ಸರ್ಕಾರಿ ಸೇವೆಗೆ ತಾಂತ್ರಿಕ ರಾಜೀನಾಮೆ ಸಲ್ಲಿಸತಕ್ಕದ್ದು.
- ವಿಲೀನಗೊಳ್ಳುವ ಸಿಬ್ಬಂದಿಗಳ ಲೆಕ್ಕದಲ್ಲಿರುವ ಗಳಿಕೆ ರಜೆಯ 240 ದಿನಗಳನ್ನು ನಗದೀಕರಣ ಗೊಳಿಸಲಾಗುವುದು ಹಾಗೂ ಉಳಿದ ರಜೆಗಳು ರದ್ದಾಗುವುದು.
- ಕಾರಾವಿ ನಿಗಮದಲ್ಲಿ ವಿಲೀನಗೊಳ್ಳುವ ಸಿಬ್ಬಂದಿಗಳ ರಾಜ್ಯ ಸರ್ಕಾರಿ ಸೇವೆಯನ್ನು ವಿಶ್ರಾಂತಿ ವೇತನದ ಸಲುವಾಗಿ ಅರ್ಹತಾದಾಯಕ ಸೇವೆಯೆಂದು ನಿಗಮವು ಪರಿಗಣಿಸ ತಕ್ಕದ್ದು ಹಾಗೂ ಹಳೆಯ ಪಿಂಚಣಿ ಸೌಲಭ್ಯ ಯೋಜನೆಯು ಅನ್ವಯಿಸತಕ್ಕದ್ದು.
  ವಿಶ್ರಾಂತಿ ವೇತನದ ಅಂಶದಾನವನ್ನು ರಾಜ್ಯ ಸರ್ಕಾರವು ನಿಗಮಕ್ಕೆ ವರ್ಗಾಯಿಸತಕ್ಕದ್ದು.
- ಸೇವಾ ಜೇಷ್ಠತೆಗೆ ಸಂಬಂಧಿಸಿದಂತೆ ಕಾರಾವಿ ನಿಗಮವು Institutional Seniority ಅನ್ನು ಪರಿಗಣಿಸುವುದು.
- ವಿಲೀನಗೊಳ್ಳುವ ವೈದ್ಯಾಧಿಕಾರಿಗಳು ಕಾರಾವಿ ಇಲಾಖೆಯಲ್ಲಿ ತಜ್ಞರ ಹುದ್ದೆಯಲ್ಲಿ ಇದ್ದರೂ ಸಹ ಕಾರಾವಿ ನಿಗಮದ ತಜ್ಞರ ಉಪ ವೃಂದದಲ್ಲಿ ವಿಲೀನಗೊಳ್ಳುವುದು.

ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.24,79,144–00ಗಳನ್ನು (ಇಪ್ಪತ್ತ್ನಾಲ್ಕು ಲಕ್ಷದ ಎಪ್ಪತ್ತೊಂಭತ್ತು ಸಾವಿರದ ಒಂದು ನೂರ ನಲವತ್ತ್ನಾಲ್ಕು ರೂ.ಗಳು ಮಾತ್ರ) ಪ್ರಕರಣಾವಾರು ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1979

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 06/05/09ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/ 2008–09/2771.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಪುರ ಗ್ರಾಮದ ಜಮೀನುಗಳಿಗೆ ಕೊಪ್ಪಳದ ಸಿವಿಲ್ ನ್ಯಾಯಾಲಯವು (ಹಿರಿಯ ಶ್ರೇಣಿ) ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 06/03/03
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 29/09/05.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಕೊಪ್ಪಳದ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣದಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ. ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ:ಆರ್‌ಡಿ 1018 ಎಲ್‌ಸಿಜಿ 2008, ದಿನಾಂಕ 05/02/09ರಲ್ಲಿ ಅಭಿಪ್ರಾಯ ನೀಡಿದೆ.

ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್‌ಎಸಿ ಸಂಖ್ಯೆ | ಪುರ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 501/08 | 119/1/1 | 1–01 | 295323 |
| 2 | 502/08 | 13/ಡಿ1 | 0–38 | 273749 |
| 3 | 503/08 | 13/ತ | 1–06 | 331276 |
| 4 | 504/08 | 13/ಗ | 3–18 | 992827 |
| 5 | 505/08 | 13/ಕೆ | 0–30 | 216223 |
| 6 | 506/08 | 115/1 | 0–32 | 230605 |
| 7 | 507/08 | 115/2 | 1–20 | 431947 |

| ಕ್ರ. ಸಂ | ಎಲ್ಎಸಿ ಸಂಖ್ಯೆ | ಪುರ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 8 | 508/08 | 13/ಇ | 1–00 | 288131 |
| 9 | 509/08 | 115/3 | 0–05 | 36454 |
| | ಒಟ್ಟು | | | **3096535** |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 73 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ: 28ನೇ ಜುಲೈ 2009**

ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಪುರ ಗ್ರಾಮದ ಸ.ನಂ.ಗಳ ಜಮೀನುಗಳಿಗೆ ಕೊಪ್ಪಳದ ಸಿವಿಲ್ ನ್ಯಾಯಾಲಯವು (ಹಿರಿಯ ಶ್ರೇಣಿ) ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.30,96,535–00ಗಳನ್ನು (ಮೂವತ್ತು ಲಕ್ಷದ ತೊಂಭತ್ತಾರು ಸಾವಿರದ ಐನೂರ ಮೂವತ್ತೈದು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1980

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಬಿಜಾಪುರ ಜಿಲ್ಲೆ ಮುದ್ದೇಬಿಹಾಳ ತಾಲ್ಲೂಕು ಹೊಕ್ರಾಣಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನ ಪಡಿಸಿಕೊಂಡ ಜಮೀನುಗಳಿಗೆ ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ನೀಡಿರುವ ಐತೀರ್ಪಿನಂತೆ ಪರಿಹಾರ ಧನ ಪಾವತಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ: 20/04/2009ರ ಪತ್ರ ಸಂಖ್ಯೆ: ಮುಇಂ/ಸನೀ/(ಉ)ವ/ಬಿಜಾ/ಭೂಸ್ವಾಪ್ರ/2008–09/2644.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ ತಾಲ್ಲೂಕು, ಹೊಕ್ರಾಣಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಹೊಕ್ರಾಣಿ ಮತ್ತು ಅಬ್ಬಿಹಾಳ ಗ್ರಾಮದ ವಿವಿಧ ಸರ್ವೆ ನಂಬರ್‌ಗಳಿಗೆ ಸೇರಿದ ಜಮೀನುಗಳಿಗೆ ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ರಚಿಸಲಾದ ಐತೀರ್ಪಿನಂತೆ ಪರಿಹಾರ ಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 13/08/1964.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 16/03/1967.

ಸದರಿ ಭೂಸ್ವಾಧೀನ ಪ್ರಕ್ರಿಯೆಲ್ಲಿ ಸೇರಿದ್ದ ಕೆಲವೊಂದು ಸರ್ವೆ ನಂಬರ್‌ಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಮುದ್ದೇಬಿಹಾಳ ಸಿವಿಲ್ ನ್ಯಾಯಾಲಯದಲ್ಲಿ ಪ್ರಕರಣ ಎಲ್.ಎ.ಸಿ 1/02 ನ್ನು ದಾಖಲಿಸಿ ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪನ್ನು ಪಡೆದುಕೊಂಡು ಇನ್ನೂ ಹೆಚ್ಚಿನ ಸವಲತ್ತಿಗಾಗಿ ಈ ತೀರ್ಪಿನ ವಿರುದ್ಧ ಬಿಜಾಪುರ ಜಿಲ್ಲಾ ನ್ಯಾಯಾಲಯದಲ್ಲಿ ಮೇಲ್ಮನವಿ ಸಂಖ್ಯೆ: 3/04 ನ್ನು ದಾಖಲಿಸಿದ್ದು, ಸದರಿ ಮೇಲ್ಮನವಿಯು ವಜಾಗೊಂಡಿರುತ್ತದೆ.

ಜಿಲ್ಲಾ ನ್ಯಾಯಾಲಯದ ಈ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯ ಪತ್ರ ಸಂಖ್ಯೆ: ಲಾ 865 ಎಲ್‌ಬಿಎಸ್ ದಿನಾಂಕ 18/05/2007ರಲ್ಲಿ ಅಭಿಪ್ರಾಯ ನೀಡಿದೆ.

ಸದರಿ ಎಲ್.ಎ.ಸಿ ಪ್ರಕರಣವನ್ನು ಉಲ್ಲೇಖಿಸಿ ಇದೇ ಭೂಸ್ವಾಧೀನ ಪ್ರಕ್ರಿಯೆಯಲ್ಲಿ ಸೇರಿದ್ದ ಹೊಕ್ರಾಣಿ ಮತ್ತು ಅಬ್ಬಿಹಾಳ ಗ್ರಾಮದ ಕೆಳಗೆ ತಿಳಿಸಿರುವ ಸರ್ವೆ ನಂಬರ್‌ಗಳಿಗೆ ಸೇರಿದ ಭೂಮಾಲೀಕರು ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ಸಲ್ಲಿಸಿದ್ದ ಅರ್ಜಿಯ ಮೇರೆಗೆ ಬಿಜಾಪುರ ಉಪವಿಭಾಗಾಧಿಕಾರಿಗಳು ಈ ಕಾಯ್ದೆ ಅಡಿ ಸದರಿ ಸರ್ವೆ ನಂಬರ್‌ಗಳ ಜಮೀನುಗಳಿಗೆ ದಿನಾಂಕ 27/09/2008 ರಂದು ಸಿವಿಲ್ ನ್ಯಾಯಾಲಯವು ನಿಗಧಿಪಡಿಸಿದ ಭೂಮೌಲ್ಯವನ್ನೊಳಗೊಂಡಂತೆ ಹೆಚ್ಚಿನ ಪರಿಹಾರ ಧನಕ್ಕಾಗಿ ಐತೀರ್ಪುನ್ನು ರಚಿಸಿರುತ್ತಾರೆ.

ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ರಚಿಸಿದ ಐತೀರ್ಪು ಸಂಖ್ಯೆ: ಎಲ್.ಎ.ಕ್ಯೂ.ಸಿ.ಆರ್. 917 28(ಎ) ದಿನಾಂಕ:27/09/2008ರ ಅನುಸಾರ ಹೆಚ್ಚಿನ ಪರಿಹಾರ ಧನ ಪಾವತಿ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ. | ಸ.ನಂ | ವಿಸ್ತೀರ್ಣ ಎ–ಗುಂ | ಗ್ರಾಮ | ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 66/1 | 01–19 | ಹೊಕ್ರಾಣಿ | 101607 |
| 2 | 67 | 06–10 | ಹೊಕ್ರಾಣಿ | 430542 |
| 3 | 79/4 | 13–30 | ಹೊಕ್ರಾಣಿ | 947189 |
| 4 | 68/1 | 02–21 | ಹೊಕ್ರಾಣಿ | 173689 |
| 5 | 68/2 | 02–33 | ಹೊಕ್ರಾಣಿ | 194603 |
| 6 | 68/3 | 03–00 | ಹೊಕ್ರಾಣಿ | 206660 |
| 7 | 68/4 | 02–20 | ಹೊಕ್ರಾಣಿ | 172214 |
| 8 | 68/5 | 03–25 | ಹೊಕ್ರಾಣಿ | 249717 |
| 9 | 69/2 | 00–05 | ಹೊಕ್ರಾಣಿ | 7043 |
| 10 | 69/3 | 03–10 | ಹೊಕ್ರಾಣಿ | 222631 |
| 11 | 75/2 | 07–23 | ಹೊಕ್ರಾಣಿ | 520293 |
| 12 | 76 | 14–33 | ಹೊಕ್ರಾಣಿ | 1030429 |
| 13 | 78/1 | 06–33 | ಹೊಕ್ರಾಣಿ | 470154 |
| 14 | 78/2 | 11–24 | ಹೊಕ್ರಾಣಿ | 799084 |
| 15 | 79/1 | 02–23 | ಹೊಕ್ರಾಣಿ | 177385 |
| 16 | 79/2 | 03–33 | ಹೊಕ್ರಾಣಿ | 263488 |
| 17 | 79/3 | 03–22 | ಹೊಕ್ರಾಣಿ | 244545 |
| 18 | 32/2 | 05–31 | ಅಬ್ಬಿಹಾಳ | 403243 |
| 19 | 33/2ಎ | 02–16 | ಅಬ್ಬಿಹಾಳ | 164827 |
| 20 | 33/2ಬಿ | 01–13 | ಅಬ್ಬಿಹಾಳ | 90480 |
| 21 | 87/1 | 02–12 | ಅಬ್ಬಿಹಾಳ | 156874 |
| | **ಒಟ್ಟು** | | | **7026697** |

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 70 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ: 3ನೇ ಆಗಸ್ಟ್ 2009**

ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ ತಾಲ್ಲೂಕು, ಹೊಕ್ರಾಣಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಹೊಕ್ರಾಣಿ ಮತ್ತು ಅಬ್ಬಿಹಾಳ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಉಪ ವಿಭಾಗಧಿಕಾರಿಗಳು ಬಿಜಾಪುರ ಇವರು ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ಹೊರಡಿಸಿರುವ ಐತೀರ್ಪಿನಂತೆ ಪರಿಹಾರ ಧನ ಮೊತ್ತ ರೂ.70,26,697–00ಗಳನ್ನು(ಎಪ್ಪತ್ತು ಲಕ್ಷದ ಇಪ್ಪತ್ತಾರು ಸಾವಿರದ ಆರುನೂರ ತೊಂಭತ್ತೇಳು ರೂಪಾಯಿಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಡೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳ ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2008 ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1981

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ವಿಷಯ:** ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕಿನ ಪುರ ಗ್ರಾಮದ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿ ಕೊಳ್ಳಲಾದ ಪುರ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 25/05/2009ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜೆಪಿ/ಭೂಸ್ವಾಪ್ರ 2009–10/3018.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ಪುರ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಪುರ ಗ್ರಾಮದ ಜಮೀನುಗಳಿಗೆ ಕೊಪ್ಪಳ ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ದಾಖಲಿಸಿದ್ದ ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 14/02/2002
- ಭೂಪರಿಹಾರ ಧನದ ಐತೀರ್ಪು ಹೊರಡಿಸಿದ ದಿನಾಂಕ 29/07/2005

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಕೊಪ್ಪಳದ ಸಿವಿಲ್ ನ್ಯಾಯಾಲಯ(ಹಿರಿಯ ಶ್ರೇಣಿ)ದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ ಸಂ | ಎಲ್ಎಸಿ | ಪುರ ಗ್ರಾಮದ ಸ.ನಂ | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 27/07 | 79 | 0–24 | 195092 |
| 2 | 30/07 | 83/1 | 0–14 | 114014 |
| 3 | 24/07 | 81/2 | 0–38 | 308608 |
| 4 | 26/07 | 80/B | 0–11 | 89690 |
| 5 | 28/07 | 80/A3 | 1–03 | 349149 |
| 6 | 31/07 | 94/B | 0–25 | 203202 |
| 7 | 32/07 | 95 | 0–32 | 259957 |
| 8 | 33/07 | 91/C | 0–32 | 259957 |
| 9 | 34/07 | 94/A | 0–29 | 235634 |
| 10 | 35/07 | 86/A2 | 0–09 | 73474 |
| 11 | 36/07 | 89/3 | 1–10 | 405903 |
| | **ಒಟ್ಟು** | | | **2494680** |

ಮೇಲ್ಕಂಡ ಪ್ರಕರಣಗಳಲ್ಲಿ ಕ್ರ.ಸಂ.1 ಮತ್ತು 2ರ ತೀರ್ಪುಗಳ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ: ಆರ್‌ಡಿ 997 ಮತ್ತು 1034 ಎಲ್‌ಸಿಜಿ 2008, ದಿನಾಂಕ 18/02/09 ಹಾಗೂ ಕ್ರ.ಸಂ.3–11ರವರೆಗಿನ ತೀರ್ಪುಗಳ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಪತ್ರ ಸಂಖ್ಯೆ:ಆರ್‌ಡಿ 999 ಎಲ್‌ಸಿಜಿ 2008, ದಿನಾಂಕ:05/02/09ರಲ್ಲಿ ಅಭಿಪ್ರಾಯ ನೀಡಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 77 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ: 3ನೇ ಆಗಸ್ಟ್ 2009**

ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ಪುರ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಪುರ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.24,94,680–00 ಗಳನ್ನು (ಇಪ್ಪತ್ತ್ನಾಲ್ಕು ಲಕ್ಷದ ತೊಂಭತ್ತ್ನಾಲ್ಕು ಸಾವಿರದ ಆರುನೂರ ಎಂಭತ್ತು ರೂ.ಗಳು ಮಾತ್ರ) ಪ್ರಕರಣಾವಾರು ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1982

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಕೊಪ್ಪಳ ಜಿಲ್ಲೆ, ಗಂಗಾವತಿ ತಾಲ್ಲೂಕು ದೇವಲಾಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 06/05/09ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/ 2008–09/2772.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಕೊಪ್ಪಳ ಜಿಲ್ಲೆ, ಗಂಗಾವತಿ ತಾಲ್ಲೂಕು ದೇವಲಾಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಚಿಕ್ಕವಡ್ಡರಕಲ್ ಗ್ರಾಮದ ಜಮೀನುಗಳಿಗೆ ಕೊಪ್ಪಳದ ಸಿವಿಲ್ ನ್ಯಾಯಾಲಯವು (ಹಿರಿಯ ಶ್ರೇಣಿ) ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 20/11/03
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 28/12/05.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಕೊಪ್ಪಳದ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣದಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ. ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ:ಆರ್‌ಡಿ 297 ಎಲ್‌ಸಿಜಿ 2008, ದಿನಾಂಕ 16/02/09ರಲ್ಲಿ ಅಭಿಪ್ರಾಯ ನೀಡಿದೆ.

ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್ಎಸಿ ಸಂಖ್ಯೆ | ಚಿಕ್ಕವಡ್ಡರಕಲ್ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 15/07 | 4/ಇ, 4/ಈ1, 4ಈ, 4/ಆ, 4ಉ, 4ಊ | 6–16 | 2280336 |
| 2 | 16/07 | 7ಬಿ | 1–20 | 534683 |
| 3 | 17/07 | 1/1, 1/2 | 4–20 | 1603450 |
| | ಒಟ್ಟು | | | **4418469** |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 74 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ: 28ನೇ ಜುಲೈ 2009**

ಕೊಪ್ಪಳ ಜಿಲ್ಲೆ, ಗಂಗಾವತಿ ತಾಲ್ಲೂಕು ದೇವಲಾಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಚಿಕ್ಕವಡ್ಡರಕಲ್ ಗ್ರಾಮದ ಸ.ನಂ.ಗಳ ಜಮೀನುಗಳಿಗೆ ಕೊಪ್ಪಳದ ಸಿವಿಲ್ ನ್ಯಾಯಾಲಯವು (ಹಿರಿಯ ಶ್ರೇಣಿ) ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.44,18,469–00ಗಳನ್ನು (ನಲವತ್ತ್ನಾಲ್ಕು ಲಕ್ಷದ ಹದಿನೆಂಟು ಸಾವಿರದ ನಾನೂರ ಅರವತ್ತೊಂಭತ್ತು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1983

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ನಿಡಶೇಷಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬ್ಯಾಲಿಹಾಳ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 30/05/09ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜಾ/ ಭೂಸ್ವಾಪ್ರ/2009–10/3131.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ನಿಡಶೇಷಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬ್ಯಾಲಿಹಾಳ ಗ್ರಾಮದ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣದಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 31/10/96
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 09/06/99

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಕೊಪ್ಪಳದ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣ ದಾಖಲಿಸಿದ್ದು, ಈ ಪ್ರಕರಣದಲ್ಲಿ ಸಿವಿಲ್ ನ್ಯಾಯಾಲಯವು ಪ್ರತಿ ಎಕರೆಗೆ ರೂ.55,000/–ಗಳಂತೆ ತೀರ್ಪು ನೀಡಿದೆ. ಇದಕ್ಕೆ ತೃಪ್ತರಾಗದ ಭೂಮಾಲೀಕರು ಇನ್ನೂ ಹೆಚ್ಚಿನ ಪರಿಹಾರ ಧನಕ್ಕಾಗಿ ಉಚ್ಚ

ನ್ಯಾಯಾಲಯದಲ್ಲಿ ಎಂಎಫ್ಎ 5085/05 ದಾಖಲಿಸಿದ್ದು, ಉಚ್ಚ ನ್ಯಾಯಾಲಯವು ಪ್ರತಿ ಎಕರೆಗೆ ರೂ.96,000/–ಗಳನ್ನು ನೀಡುವಂತೆ ತೀರ್ಪು ನೀಡಿದೆ ಹಾಗೂ ನ್ಯಾಯಾಲಯದ ವೆಚ್ಚ ರೂ.42,970–00ಗಳು ಸಹ ಪಾವತಿಸುವಂತೆ ಆದೇಶಿಸಿದೆ.

ಉಚ್ಚ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯು ಪತ್ರ ಸಂಖ್ಯೆ:ಲಾ 365 ಎಲ್ಎಸ್‌ಪಿ 2008, ದಿನಾಂಕ 26/02/08ರಲ್ಲಿ ಅಭಿಪ್ರಾಯ ನೀಡಿದೆ.

ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣದ ವಿವರ ಕೆಳಕಂಡಂತಿದೆ:

| ಕ್ರ ಸಂ | ಎಲ್ಎಸಿ ಸಂಖ್ಯೆ | ಎಂಎಫ್ಎ ಸಂಖ್ಯೆ | ಬ್ಯಾಲಿಹಾಳ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|---|
| 1 | 58/02 | 5085/05 | 7/1ಬಿ | 8–34 | 26,56,614–00 |

- **ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 98 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ: 10ನೇ ಆಗಸ್ಟ್ 2009**

ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ನಿಡಶೇಷಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಬ್ಯಾಲಿಹಾಳ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.26,56,614–00ಗಳನ್ನು (ಇಪ್ಪತ್ತಾರು ಲಕ್ಷದ ಐವತ್ತಾರು ಸಾವಿರದ ಆರುನೂರ ಹದಿನಾಲ್ಕು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1984 **ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಬಳ್ಳಾರಿ ಜಿಲ್ಲೆ, ಹಗರಿಬೊಮ್ಮನಹಳ್ಳಿ ತಾಲ್ಲೂಕು ಬನ್ನಿಗೋಳ ಗ್ರಾಮದ ಹತ್ತಿರ ಏತ ನೀರಾವರಿ ಯೋಜನೆಗೆ ಎಕ್ಸ್‌ಪ್ರೆಸ್ ಫೀಡರ್ ಲೈನ್ ಅಳವಡಿಸುವ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:** 1. ದಿನಾಂಕ 11/06/09ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜೆಪಿ/ಎಇ–12/2009–10/ 3430.

2. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ14/07/09ರ ಪತ್ರ ಸಂಖ್ಯೆ:ಮುಸದ/ಆಪ್ತ ಶಾಖೆ/ಟೆಂಡರ್/ 08–09/1695.

**ಪ್ರಸ್ತಾವನೆ:**

ಬಳ್ಳಾರಿ ಜಿಲ್ಲೆ, ಹಗರಿಬೊಮ್ಮನಹಳ್ಳಿ ತಾಲ್ಲೂಕು ಬನ್ನಿಗೋಳ ಗ್ರಾಮದ ಹತ್ತಿರ ಏತ ನೀರಾವರಿ ಯೋಜನೆಗೆ ಎಕ್ಸ್‌ಪ್ರೆಸ್ ಫೀಡರ್ ಲೈನ್ ಅಳವಡಿಸುವ ಕಾಮಗಾರಿಯ 20.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ದಿನಾಂಕ 22/01/09ರಂದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ಆಡಳಿತಾತ್ಮಕ ಅನುಮೋದನೆ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಳ್ಳಾರಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಜಿಲ್ಲಾ ಟೆಂಡರ್ ಬುಲೆಟಿನ್ | ದಿ:09/02/09 |
| 2 | ವಿಜಯ ಕರ್ನಾಟಕ ದಿನಪತ್ರಿಕೆ | ದಿ:17/02/09 |

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ 3 ಜನ ಗುತ್ತಿಗೆದಾರರ ಪೈಕಿ ಇಬ್ಬರು ಗುತ್ತಿಗೆದಾರರು ಮಾತ್ರ ನಿಗದಿತ ದಿನದಂದು ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಇವರ ಬಿಡ್‌ಗಳನ್ನು ದಿನಾಂಕ 15/05/09ರಂದು ತೆರೆಯಲಾಗಿ ಇಬ್ಬರೂ ಗುತ್ತಿಗೆದಾರರ ಟೆಂಡರುಗಳು ಅರ್ಹವಾಗಿದ್ದು, ಸ್ವೀಕರಿಸಲಾದ ಟೆಂಡರ್‌ನ ವಿವರಗಳು ಕೆಳಕಂಡಂತಿದೆ:

| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ.16,22,981/– |
|---|---|---|---|
| ಕ್ರ.ಸಂ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
| 1 | ಮೆ:ಮದೀನ್ ಎಲೆಕ್ಟ್ರಿಕಲ್ಸ್, ಹೆಚ್.ಬಿ.ಹಳ್ಳಿ. | ರೂ.18,95,045/– | 16.76 ಹೆಚ್ಚು |
| 2 | ಮೆ:ಆನಂದ್ ಎಂಟರ್‌ಪ್ರೈಸಸ್, ಹಡಗಲಿ | ರೂ.19,59,439/– | 20.73 ಹೆಚ್ಚು |

ಮೇಲ್ಕಂಡಂತೆ ಕ್ರ.ಸಂ:1ರಲ್ಲಿರುವ ಮೆ:ಮದೀನ್ ಎಲೆಕ್ಟ್ರಿಕಲ್ಸ್, ಇವರು ನಮೂದಿಸಿರುವ ಮೊತ್ತ ರೂ.18,95,045–00ಗಳು ಅತಿ ಕಡಿಮೆ ಮೊತ್ತವಾಗಿದ್ದು, ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಹೋಲಿಸಿದಾಗ ಶೇಕಡ 16.76ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 30/06/09ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ.16,22,981–00ಗಳ ಮೇಲೆ ಶೇಕಡ 14.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.18.50,198–00ಗಳಿಗೆ ಕಾಮಗಾರಿಯನ್ನು ಮೆ:ಮದೀನ್ ಎಲೆಕ್ಟ್ರಿಕಲ್ಸ್, ಹೆಚ್.ಬಿ.ಹಳ್ಳಿ ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಅಧ್ಯಕ್ಷರು ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 24 ಏನೀಯೋ 2009, ಬೆಂಗಳೂರು, ದಿನಾಂಕ: 11ನೇ ಆಗಸ್ಟ್ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಳ್ಳಾರಿ ಜಿಲ್ಲೆ, ಹಗರಿಬೊಮ್ಮನಹಳ್ಳಿ ತಾಲ್ಲೂಕು ಬನ್ನಿಗೋಳ ಗ್ರಾಮದ ಹತ್ತಿರ ಏತ ನೀರಾವರಿ ಯೋಜನೆಗೆ ಎಕ್ಸ್‌ಪ್ರೆಸ್ ಫೀಡರ್ ಲೈನ್ ಅಳವಡಿಸುವ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರ್‌ಗೆ ಇಡಲಾದ ಮೊತ್ತ ರೂ.16,22,981–00ಗಳ ಮೇಲೆ ಶೇಕಡ 14.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.18.50,198–00ಗಳಿಗೆ (ಹದಿನೆಂಟು ಲಕ್ಷದ ಐವತ್ತು ಸಾವಿರದ ಒಂದುನೂರ ತೊಂಭತ್ತೆಂಟು ರೂ.ಗಳು ಮಾತ್ರ) ಮೆ:ಮದೀನ್ ಎಲೆಕ್ಟ್ರಿಕಲ್ಸ್, ಹೆಚ್.ಬಿ.ಹಳ್ಳಿ ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1985

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಬಳ್ಳಾರಿ ಜಿಲ್ಲೆ, ಹಡಗಲಿ ತಾಲ್ಲೂಕು ಕಾಲೇನಹಳ್ಳಿ ಗ್ರಾಮದ ಸ್ಥಳಾಂತರಕ್ಕೆ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 24/06/09ರ ಪತ್ರ ವ್ಯವಹಾರದೊಂದಿಗೆ ಅಂತ್ಯಗೊಂಡಿರುವ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಭೂಸ್ವಾಪ್ರ/2008–09/3672.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಬಳ್ಳಾರಿ ಜಿಲ್ಲೆ, ಹಡಗಲಿ ತಾಲ್ಲೂಕು ಕಾಲೇನಹಳ್ಳಿ ಗ್ರಾಮದ ಸ್ಥಳಾಂತರಕ್ಕೆ ಸ್ವಾಧೀನಪಡಿಸಿಕೊಳ್ಳಲಾದ ಕಾಳೇನಹಳ್ಳಿ ಗ್ರಾಮದ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 21/11/1985
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 20/02/1987

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಹೊಸಪೇಟೆ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ.

ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್ಎಸಿ ಸಂಖ್ಯೆ | ಕಾಳೇನಹಳ್ಳಿ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 50/89 | 56ಬಿ/1 | 2–18 | 1,55,149–00 |
| 2 | 37/89 | 55ಬಿ/1 | 2–40 | |

- **ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 210 ಭೂಸ್ವಾಪ್ರ 2005, ಬೆಂಗಳೂರು, ದಿನಾಂಕ: 12ನೇ ಆಗಸ್ಟ್ 2009**

ಬಳ್ಳಾರಿ ಜಿಲ್ಲೆ, ಹಡಗಲಿ ತಾಲ್ಲೂಕು ಕಾಲೇನಹಳ್ಳಿ ಗ್ರಾಮದ ಸ್ಥಳಾಂತರಕ್ಕೆ ಸ್ವಾಧೀನಪಡಿಸಿಕೊಳ್ಳಲಾದ ಕಾಳೇನಹಳ್ಳಿ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.1,55,149–00ಗಳನ್ನು (ಒಂದು ಲಕ್ಷದ ಐವತ್ತೈದು ಸಾವಿರದ ಒಂದುನೂರ ನಲವತ್ತೊಂಭತ್ತು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1986

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಕೊಪ್ಪಳ ಜಿಲ್ಲೆ, ಗಂಗಾವತಿ ತಾಲ್ಲೂಕು ಇಂಗಳದಾಳ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 28/05/09ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜಾ/ ಭೂಸ್ವಾಪ್ರ/2009-10/3071.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಕೊಪ್ಪಳ ಜಿಲ್ಲೆ, ಗಂಗಾವತಿ ತಾಲ್ಲೂಕು ಇಂಗಳದಾಳ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಇಂಗಳದಾಳ ಗ್ರಾಮದ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 07/03/1991
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 15/04/1994

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಗಂಗಾವತಿಯ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿದ್ದ ಈ ಕೆಳಕಂಡ ಎಲ್.ಎ.ಸಿ. ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ.

| ಕ್ರ. ಸಂ | ಎಲ್ಎಸಿ ಸಂಖ್ಯೆ | ಇ.ಪಿ. ಸಂಖ್ಯೆ | ಇಂಗಳದಾಳ ಗ್ರಾಮದ ಸ.ನಂ. | ವಿಸ್ತೀರ್ಣ ಎ-ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|---|
| 1 | 12/01 | 41/08 | 5 | 6-38 | 731414 |
| 2 | 13/01 | 40/08 | 8/ಎ,ಬಿ,ಸಿ,ಡಿ | 4-07 | 439374 |
| 3 | 14/01 | 39/08 | 13/1 | 5-13 | 560400 |
| | **ಒಟ್ಟು** | | | | **1731188** |

- **ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.**

ಮೇಲ್ಕಂಡ ಎಲ್.ಎ.ಸಿ. ಪ್ರಕರಣಗಳಲ್ಲಿ ಮಾನ್ಯ ಸಿವಿಲ್ ನ್ಯಾಯಾಲಯವು ಸಾಮಾನ್ಯ ತೀರ್ಪು ನೀಡಿದ್ದು, ಎಲ್.ಎ.ಸಿ.ಸಂಖ್ಯೆ:14/01 ಮುಖ್ಯ ಪ್ರಕರಣವೆಂದು ತಿಳಿಸಿದೆ. ಈ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯು ಪತ್ರ ಸಂಖ್ಯೆ:ಆರ್‌ಡಿ 6 ಎಲ್ಸಿಜಿ 2008, ದಿನಾಂಕ 12/03/08ರಲ್ಲಿ ಅಭಿಪ್ರಾಯ ನೀಡಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 101 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ: 13ನೇ ಆಗಸ್ಟ್ 2009**

ಕೊಪ್ಪಳ ಜಿಲ್ಲೆ, ಗಂಗಾವತಿ ತಾಲ್ಲೂಕು ಇಂಗಳದಾಳ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಇಂಗಳದಾಳ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.17,31,188-00ಗಳನ್ನು (ಹದಿನೇಳು ಲಕ್ಷದ ಮೂವತ್ತೊಂದು ಸಾವಿರದ ನೂರ ಎಂಭತ್ತೆಂಟು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009-10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702-00-800-1-00-ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು-ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1987

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕು ಕಮತನೂರು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಕಮತನೂರು ಗ್ರಾಮದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 12/06/09ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜಾ/ಭೂಸ್ವಾ/2009–10/3462.

2. ಸರ್ಕಾರದ ಆದೇಶ ಸಂಖ್ಯೆ:ಸನೀಇ 224 ಭೂಸ್ವಾಪ್ರ 2005, ದಿನಾಂಕ 28/01/06

3. ಸರ್ಕಾರದ ಆದೇಶ ಸಂಖ್ಯೆ:ಸನೀಇ 69 ಭೂಸ್ವಾಪ್ರ 2005, ದಿನಾಂಕ 18/05/05.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕು ಕಮತನೂರು ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಕಮತನೂರು ಗ್ರಾಮದ ಜಮೀನುಗಳಿಗೆ ನ್ಯಾಯಾಲಯವು ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 29/12/1994.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 18/05/1998.

ಭೂಸ್ವಾಧೀನಕ್ಕೊಳಪಟ್ಟ ಜಮೀನಿನ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಂತೆ ಹಣ ಪಡೆದು ಹೆಚ್ಚಿನ ಪರಿಹಾರ ಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರನ್ವಯ ಹುಕ್ಕೇರಿ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ದಾಖಲಿಸಿದ್ದ ಎಲ್.ಎ.ಸಿ. ಸಂಖ್ಯೆ:168/01 ಮತ್ತು ಎಲ್.ಎ.ಸಿ. ಸಂಖ್ಯೆ:132/01ರಲ್ಲಿ ಸಿವಿಲ್ ನ್ಯಾಯಾಲಯವು ನೀಡಿದ ತೀರ್ಪಿನ ವಿರುದ್ದ ಸರ್ಕಾರವು ಉಚ್ಚ ನ್ಯಾಯಾಲಯದಲ್ಲಿ ಕ್ರಮವಾಗಿ ಎಂ.ಎಫ್.ಎ.4770/05 ಮತ್ತು ಎಂ.ಎಫ್ಎ.7592/04ನ್ನು ದಾಖಲಿಸಿದ್ದು, ಉಚ್ಚ ನ್ಯಾಯಾಲಯವು ಸದರಿ ಪ್ರಕರಣಗಳಲ್ಲಿ ನೀಡಿದ ಮಧ್ಯಂತರ ಆದೇಶದನುಸಾರ ಶೇ.50ರಷ್ಟು ಮೊತ್ತವನ್ನು ಪಾವತಿಸಲು ಮೇಲೆ ಓದಲಾದ (2) ಮತ್ತು (3)ರ ಸರ್ಕಾರಿ ಆದೇಶಗಳಲ್ಲಿ ಅನುಮೋದನೆ ನೀಡಲಾಗಿದೆ. ಈ ಎರಡೂ ಎಂ.ಎಫ್.ಎ. ಪ್ರಕರಣಗಳು ಕ್ರಮವಾಗಿ ದಿನಾಂಕ 02/01/08 ಮತ್ತು 23/10/07ರ ತೀರ್ಪಿನಲ್ಲಿ ವಜಾಗೊಂಡಿವೆ.

ಈ ತೀರ್ಪುಗಳ ವಿರುದ್ಧ ಮೇಲ್ಮನವಿ ಸಲ್ಲಿಸುವ ಅವಶ್ಯಕತೆಯಿಲ್ಲವೆಂದು ಕಾನೂನು ಇಲಾಖೆಯು ಪತ್ರ ಸಂಖ್ಯೆ: ಲಾ 918 ಎಲ್ಎಸ್‌ಪಿ 2008, ದಿನಾಂಕ 30/06/08 ಮತ್ತು ಲಾ 1332 ಎಲ್‌ಬಿಎಸ್ 2008, ದಿನಾಂಕ 14/08/08ರಲ್ಲಿ ಅಭಿಪ್ರಾಯ ನೀಡಿದೆ.

ಇದೇ ಕೆರೆಯ ಭೂಸ್ವಾಧೀನ ಪ್ರಕ್ರಿಯೆಯಲ್ಲಿ ಸೇರಿದ್ದ ಕಮತನೂರು ಗ್ರಾಮದ ಸ.ನಂ.311ರ 0–12 ಎಕರೆ ಜಮೀನಿನ ಭೂಮಾಲೀಕರು ದಾಖಲಿಸಿದ್ದ ಎಲ್.ಎ.ಸಿ. ಸಂಖ್ಯೆ:162/01ರಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ್ದು, ಈ ತೀರ್ಪಿನ ವಿರುದ್ಧ ಮೇಲ್ಮನವಿ ಅಗತ್ಯವಿಲ್ಲವೆಂದು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ: ಆರ್‌ಡಿ 986 ಎಲ್‌ಸಿಬಿ 2008, 05/12/08ರಲ್ಲಿ ಅಭಿಪ್ರಾಯ ನೀಡಿದೆ.

ಹೆಚ್ಚಿನ ಪರಿಹಾರ ಧನ ಪಾವತಿಸಬೇಕಾಗಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್ಎಸಿ ಸಂ. | ಎಂಎಫ್ಎ ಸಂಖ್ಯೆ | ಕಮತನೂರು ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|---|
| 1 | 168/01 | 4770/05 | 309/19<br>309/27 | 0–17<br>0–24 | 436112 |
| 2 | 132/01 | 7592/04 | 295 | 2–10 | 1030800 |
| 3 | 162/01 | – | 311 | 0–15 | 188790 |
| | **ಒಟ್ಟು** | | | | **1655702** |

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 106 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ: 13ನೇ ಆಗಸ್ಟ್ 2009**

ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕು ಕಮತನೂರು ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಕಮತನೂರು ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.16,55,702–00ಗಳನ್ನು (ಹದಿನಾರು ಲಕ್ಷದ ಐವತ್ತೈದು ಸಾವಿರದ ಎಳುನೂರ ಎರಡು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1988

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಹಾಸನ ಜಿಲ್ಲೆ, ಹೊಳೆನರಸೀಪುರ ತಾಲ್ಲೂಕು, ಚಾಕೇನಹಳ್ಳಿ ಜಲಾಶಯ ಅಭಿವೃದ್ಧಿ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ : ಸನೀಇ 10 ನಯೋಕಾ 2007 ದಿನಾಂಕ:13.05.2009.
2. ದಿನಾಂಕ: 17.07.2009ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂಖ್ಯೆ: ಮುಸದ /ತಾಂ–2/ಸ.ಇಂ.–4/ಹಾಸನ/ಹೆಚ್.ಎನ್.ಪುರ/ಟೆಂಡರ್/ 2009–10/2834.
3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ(ದಕ್ಷಿಣ)ವಲಯ, ಬೆಂಗಳೂರು ರವರ ದಿನಾಂಕ 16.07.2009 ರ ಪತ್ರ ಸಂಖ್ಯೆ: ಮುಸದ/ ಆಪ್ತಶಾಖೆ/ ಟೆಂಡರ್/08–09/1726.

**ಪ್ರಸ್ತಾವನೆ:**

ಹಾಸನ ಜಿಲ್ಲೆ, ಹೊಳೆನರಸೀಪುರ ತಾಲ್ಲೂಕು, ಚಾಕೇನಹಳ್ಳಿ ಜಲಾಶಯ ಅಭಿವೃದ್ಧಿ ಕಾಮಗಾರಿಯ 427.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ(1)ರಲ್ಲಿ ಓದಲಾದ ದಿನಾಂಕ 13/05/09ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಹಾಸನ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| **ರಾಜ್ಯ ಟೆಂಡರ್ ಬಲೆಟಿನ್** | **11.02.2009** |
| **ಕರ್ನಾಟಕ ರಾಜ್ಯ ಪತ್ರ** | **12.02.2009** |
| **ವಿಜಯ ಕರ್ನಾಟಕ ದಿನ ಪತ್ರಿಕೆ** | **19.02.2009** |
| **ಉದಯವಾಣಿ ದಿನ ಪತ್ರಿಕೆ** | **19.02.2009** |
| **ದಿ ನ್ಯೂ ಇಂಡಿಯನ್ ಎಕ್ಸಪ್ರೆಸ್ ದಿನಪತ್ರಿಕೆ** | **19.02.2009** |

ಈ ಟೆಂಡರ್ ಕರೆಗೆ ಪ್ರತಿಕ್ರಿಯಿಸಿ ಖಾಲಿ ಟೆಂಡರ್ ಫಾರಂ ಪಡೆದ 3 ಜನ ಗುತ್ತಿಗೆದಾರರ ಪೈಕಿ ನಿಗದಿತ ದಿನದಂದು ಇಬ್ಬರು ಗುತ್ತಿಗೆದಾರರು ಮಾತ್ರ ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ತಾಂತ್ರಿಕ ಬಿಡ್ ಅನ್ನು ದಿನಾಂಕ 22/06/09ರಂದು ತೆರೆಯಲಾಗಿ ಇಬ್ಬರು ಗುತ್ತಿಗೆದಾರರ ಟೆಂಡರುಗಳು ಅರ್ಹವಾಗಿದ್ದು, ಅವರ ಆರ್ಥಿಕ ಬಿಡ್‌ಗಳನ್ನು

ದಿನಾಂಕ 23/06/09ರಂದು ತೆರೆಯಲಾಗಿದೆ. ಆರ್ಥಿಕ ಬಿಡ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| | |
|---|---|
| **ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ** | **ರೂ 4,16,12,942/–** |
| **ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ** | **ರೂ 4,16,12,942/–** |

| ಕ್ರಸಂ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
|---|---|---|---|---|
| 1 | ಎನ್.ನಾರಯಣ ರೆಡ್ಡಿ , 1ನೇ ದರ್ಜೆ ಗುತ್ತಿಗೆದಾರರು | 5,10,47,656/– | 22.67 ಹೆಚ್ಚು | 22.67 ಹೆಚ್ಚು |
| 2 | ಹೆಚ್.ವಿ ಕೃಷ್ಣ 1ನೇ ದರ್ಜೆ ಗುತ್ತಿಗೆದಾರರು | 5,18,25,556/– | 24.54 ಹೆಚ್ಚು | 24.54 ಹೆಚ್ಚು |

ಮೇಲ್ಕಂಡಂತೆ ಕ್ರ.ಸಂ:1ರಲ್ಲಿರುವ ಶ್ರೀ ಎನ್.ನಾರಾಯಣ ರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರು ಇವರು ನಮೂದಿಸಿರುವ ಮೊತ್ತ ರೂ. 5,10,47,656–00ಗಳು ಅತಿ ಕಡಿಮೆ ಮೊತ್ತವಾಗಿದ್ದು, ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 22.67ರಷ್ಟು ಹೆಚ್ಚಾಗಿದೆ. ಈ ಕಾಮಗಾರಿಯನ್ನು ತಕ್ಷಣವೇ ಕೈಗೊಳ್ಳುವ ಅಗತ್ಯವಿದ್ದುದರಿಂದ, ದಿನಾಂಕ 15/07/09ರಂದು ನಡೆದ ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯಲ್ಲಿ ಸಮಿತಿಯ ಅಧ್ಯಕ್ಷರ ಅನುಮತಿಯೊಂದಿಗೆ ಟೆಂಡರ್‌ನ್ನು ಪರಿಶೀಲಿಸಲಾಗಿದ್ದು, ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 4,16,12,942–00ಗಳ ಮೇಲೆ ಶೇಕಡ 14.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.4,74,38,754–00ಗಳಿಗೆ ಕಾಮಗಾರಿಯನ್ನು ಶ್ರೀ ಎನ್.ನಾರಾಯಣ ರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರು, ಬೆಂಗಳೂರು ಇವರಿಗೆ ವಹಿಸಲು ಸಮಿತಿಯು ತೀರ್ಮಾನಿಸಿರುವುದಾಗಿ ತಿಳಿಸಿ ಟೆಂಡರ್‌ನ್ನು ಅಂಗೀಕರಿಸಲು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್‌ರವರು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ದಿನಾಂಕ 15/07/09ರ ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ನಡವಳಿಗಳನ್ನು ಮೇಲೆ 3ರಲ್ಲಿ ಓದಲಾದ ಪತ್ರದೊಂದಿಗೆ ಸ್ವೀಕರಿಸಲಾಗಿದ್ದು, ನಡವಳಿಗಳನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 44 ಅಪಿಬಂ 2009, ಬೆಂಗಳೂರು, ದಿನಾಂಕ: 30ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾಸನ ಜಿಲ್ಲೆ, ಹೊಳೆನರಸೀಪುರ ತಾಲ್ಲೂಕು, ಚಾಕೇನಹಳ್ಳಿ ಜಲಾಶಯ ಅಭಿವೃದ್ಧಿ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 4,16,12,942/–ಗಳ ಮೇಲೆ ಶೇಕಡ 14.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 4,74,38,754/–ಗಳಿಗೆ (ನಾಲ್ಕು ಕೋಟಿ ಎಪ್ಪತ್ನಾಲ್ಕು ಲಕ್ಷದ ಮೂವತ್ತೆಂಟು ಸಾವಿರದ ಏಳುನೂರ ಐವತ್ತಾ ನಾಲ್ಕು ರೂ.ಗಳು ಮಾತ್ರ) ಶ್ರೀ ಎನ್.ನಾರಾಯಣ ರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರು, ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2036 **ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಬಾಗಲಕೋಟೆ ಜಿಲ್ಲೆ, ಮುಧೋಳ ತಾಲ್ಲೂಕು, ಭಂಟನೂರ–ಹೆಬ್ಬಾಳ ಗ್ರಾಮಗಳ ಹತ್ತಿರ ಬ್ಯಾರೇಜ್ ಸಹಿತ ಸೇತುವೆ ನಿರ್ಮಾಣ ಕಾಮಗಾಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಸನೀಇ 15 ಮಸಾವಿ 2009 (1) ದಿನಾಂಕ 16.02.2009.

2. ದಿನಾಂಕ: 17.07.2009ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂಖ್ಯೆ: ಮುಇಂ /ಸನೀ(ಉ)ವಲಯ /ಬಿಜೆಪಿ /ಎಇ–6 /2009–10 /4229.
3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ(ದಕ್ಷಿಣ)ವಲಯ, ಬೆಂಗಳೂರು ರವರ ದಿನಾಂಕ 16.07.2009 ರ ಪತ್ರ ಸಂಖ್ಯೆ: ಮುಸದ/ ಆಪ್ತಶಾಖೆ/ ಟೆಂಡರ್/08–09/1726.

**ಪ್ರಸ್ತಾವನೆ:**

ಬಾಗಲಕೋಟೆ ಜಿಲ್ಲೆ, ಮುಧೋಳ ತಾಲ್ಲೂಕು, ಭಂಟನೂರ–ಹೆಬ್ಬಾಳ ಗ್ರಾಮಗಳ ಹತ್ತಿರ ಬ್ಯಾರೇಜ್ ಸಹಿತ ಸೇತುವೆ ನಿರ್ಮಾಣ ಕಾಮಗಾರಿಯ 225.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ(1)ರಲ್ಲಿ ಓದಲಾದ ದಿನಾಂಕ 16/02/09ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | **ರಾಜ್ಯ ಟೆಂಡರ್ ಬುಲೆಟಿನ್** | **ದಿ:31/01/09** |
| 2 | **ಸಂಯುಕ್ತ ಕರ್ನಾಟಕ ದಿನಪತ್ರಿಕೆ** | **ದಿ:04/02/09** |
| 3 | **ವಿಜಯ ಕರ್ನಾಟಕ ದಿನಪತ್ರಿಕೆ** | **ದಿ:13/02/09** |

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ 5 ಜನ ಗುತ್ತಿಗೆದಾರರ ಪೈಕಿ ನಿಗದಿತ ದಿನದಂದು ಮೂವರು ಗುತ್ತಿಗೆದಾರರು ಮಾತ್ರ ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ತಾಂತ್ರಿಕ ಬಿಡ್ ಅನ್ನು ದಿನಾಂಕ 15/06/09ರಂದು ತೆರೆಯಲಾಗಿ ಮೂವರು ಗುತ್ತಿಗೆದಾರರ ಟೆಂಡರುಗಳು ಅರ್ಹವಾಗಿದ್ದು, ಅವರ ಆರ್ಥಿಕ ಬಿಡ್‌ಗಳನ್ನು ದಿನಾಂಕ 26/06/09ರಂದು ತೆರೆಯಲಾಗಿದೆ. ಆರ್ಥಿಕ ಬಿಡ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| | |
|---|---|
| **ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ** | ರೂ **2,05,83,235/–** |
| **ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ** | ರೂ **2,01,05,973/–** |

| **ಕ್ರ.ಸಂ** | **ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್** | **ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ** | **ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ** | **ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ** |
|---|---|---|---|---|
| 1 | ಎನ್.ವಿ.ಕುಲಕರ್ಣಿ | 2,46,83,254/– | 19.92 ಹೆಚ್ಚು | 22.77 ಹೆಚ್ಚು |
| 2 | ಎಸ್.ಎಸ್. ಆಲೂರ್ | 2,59,13,888/– | 25.89 ಹೆಚ್ಚು | 28.89 ಹೆಚ್ಚು |
| 2 | ಜಿ. ಶಂಕರ್ | 2,75,63,419/– | 33.91 ಹೆಚ್ಚು | 37.09 ಹೆಚ್ಚು |

ಮೇಲ್ಕಂಡಂತೆ ಕ್ರ.ಸಂ:1ರಲ್ಲಿರುವ ಶ್ರೀ ಎನ್.ವಿ.ಕುಲಕರ್ಣಿ, 1ನೇ ದರ್ಜೆ ಗುತ್ತಿಗೆದಾರರು ಇವರು ನಮೂದಿಸಿರುವ ಮೊತ್ತ ರೂ. 2,46,83,254–00ಗಳು ಅತಿ ಕಡಿಮೆ ಮೊತ್ತವಾಗಿದ್ದು, ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 22.77ರಷ್ಟು ಹೆಚ್ಚಾಗಿದೆ. ಈ ಕಾಮಗಾರಿಯನ್ನು ತಕ್ಷಣವೇ ಕೈಗೊಳ್ಳುವ ಅಗತ್ಯವಿದ್ದುದರಿಂದ, ದಿನಾಂಕ 15/07/09ರಂದು ನಡೆದ ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯಲ್ಲಿ ಸಮಿತಿಯ ಅಧ್ಯಕ್ಷರ ಅನುಮತಿಯೊಂದಿಗೆ ಟೆಂಡರ್‌ನ್ನು ಪರಿಶೀಲಿಸಲಾಗಿದ್ದು, ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 2,01,05,973/–ಗಳ ಮೇಲೆ ಶೇಕಡ 14.90ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.2,31,01,763–00ಗಳಿಗೆ ಕಾಮಗಾರಿಯನ್ನು ಶ್ರೀ ಎನ್.ವಿ.ಕುಲಕರ್ಣಿ, 1ನೇ ದರ್ಜೆ ಗುತ್ತಿಗೆದಾರರು, ಬೆಂಗಳೂರು ಇವರಿಗೆ ವಹಿಸಲು ಸಮಿತಿಯು ತೀರ್ಮಾನಿಸಿರುವುದಾಗಿ ತಿಳಿಸಿ ಟೆಂಡರ್‌ನ್ನು ಅಂಗೀಕರಿಸಲು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್‌ರವರು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ದಿನಾಂಕ 15/07/09ರ ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ನಡವಳಿಗಳನ್ನು ಮೇಲೆ 3ರಲ್ಲಿ ಓದಲಾದ ಪತ್ರದೊಂದಿಗೆ ಸ್ವೀಕರಿಸಲಾಗಿದ್ದು, ನಡವಳಿಗಳನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 53 ಅಪಿಬಂ 2009, ಬೆಂಗಳೂರು, ದಿನಾಂಕ: 13ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಾಗಲಕೋಟೆ ಜಿಲ್ಲೆ, ಮುಧೋಳ ತಾಲ್ಲೂಕು, ಭಂಟನೂರ–ಹೆಬ್ಬಾಳ ಗ್ರಾಮಗಳ ಹತ್ತಿರ ಬ್ಯಾರೇಜ್ ಸಹಿತ ಸೇತುವೆ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 2,01,05,973/–ಗಳ ಮೇಲೆ ಶೇಕಡ 14.90ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 2,31,01,763/–ಗಳಿಗೆ (ಎರಡು ಕೋಟಿ ಮೂವತ್ತೊಂದು ಲಕ್ಷದ ಒಂದು ಸಾವಿರದ ಏಳುನೂರ ಅರವತ್ತಾ ಮೂರು ರೂ.ಗಳು ಮಾತ್ರ) ಶ್ರೀ ಎನ್.ವಿ.ಕುಲಕರ್ಣಿ, 1ನೇ ದರ್ಜೆ ಗುತ್ತಿಗೆದಾರರು, ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2037

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಬಾಗಲಕೋಟೆ ಜಿಲ್ಲೆ, ಮುಧೋಳ ತಾಲ್ಲೂಕು, ಭಂಟನೂರ ಚಿಕ್ಕೂರ ಗ್ರಾಮಗಳ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಸನೀಇ 15 ಮಸಾವಿ 2009 (1) ದಿನಾಂಕ 16.02.2009.

2. ದಿನಾಂಕ: 17.07.2009ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂಖ್ಯೆ: ಮುಇಂ /ಸನೀ(ಉ)ವಲಯ /ಬಿಜೆಪಿ /ಎಇ–6 /2009–10 /4228.

3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ(ದಕ್ಷಿಣ)ವಲಯ, ಬೆಂಗಳೂರು ರವರ ದಿನಾಂಕ 16.07.2009 ರ ಪತ್ರ ಸಂಖ್ಯೆ: ಮುಸದ/ ಆಪ್ತಶಾಖೆ/ ಟೆಂಡರ್/08–09/1726.

**ಪ್ರಸ್ತಾವನೆ:**

ಬಾಗಲಕೋಟೆ ಜಿಲ್ಲೆ, ಮುಧೋಳ ತಾಲ್ಲೂಕು, ಭಂಟನೂರ ಚಿಕ್ಕೂರ ಗ್ರಾಮಗಳ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯ 225.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ(1)ರಲ್ಲಿ ಓದಲಾದ ದಿನಾಂಕ 16/02/09ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| **1** | **ರಾಜ್ಯ ಟೆಂಡರ್ ಬುಲೆಟಿನ್** | **ದಿ:31/01/09** |
| **2** | **ಸಂಯುಕ್ತ ಕರ್ನಾಟಕ ದಿನಪತ್ರಿಕೆ** | **ದಿ:04/02/09** |
| **3** | **ವಿಜಯ ಕರ್ನಾಟಕ ದಿನಪತ್ರಿಕೆ** | **ದಿ:13/02/09** |

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ 5 ಜನ ಗುತ್ತಿಗೆದಾರರ ಪೈಕಿ ನಿಗದಿತ ದಿನದಂದು ಮೂವರು ಗುತ್ತಿಗೆದಾರರು ಮಾತ್ರ ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ತಾಂತ್ರಿಕ ಬಿಡ್ ಅನ್ನು ದಿನಾಂಕ 15/06/09ರಂದು ತೆರೆಯಲಾಗಿ ಮೂವರು ಗುತ್ತಿಗೆದಾರರ ಟೆಂಡರುಗಳು ಅರ್ಹವಾಗಿದ್ದು, ಅವರ ಆರ್ಥಿಕ ಬಿಡ್‌ಗಳನ್ನು ದಿನಾಂಕ 26/06/09ರಂದು ತೆರೆಯಲಾಗಿದೆ. ಆರ್ಥಿಕ ಬಿಡ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| | |
|---|---|
| **ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ** | ರೂ **2,05,00,600/–** |
| **ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ** | ರೂ **1,98,34,345/–** |

| ಕ್ರ.ಸಂ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ<br>ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
|---|---|---|---|---|
| 1 | ಎಸ್.ಎಸ್.ಆಲೂರ | 2,46,75,122/– | 20.36 ಹೆಚ್ಚು | 24.40 ಹೆಚ್ಚು |
| 2 | ಎನ್.ವಿ.ಕುಲಕರ್ಣಿ | 2,58,50,411/– | 26.09 ಹೆಚ್ಚು | 30.33 ಹೆಚ್ಚು |
| 3 | ಜಿ. ಶಂಕರ | 2,76,50,587/– | 34.87 ಹೆಚ್ಚು | 39.40 ಹೆಚ್ಚು |

ಮೇಲ್ಕಂಡಂತೆ ಕ್ರ.ಸಂ:1ರಲ್ಲಿರುವ ಶ್ರೀ ಎಸ್.ಎಸ್.ಆಲೂರ, 1ನೇ ದರ್ಜೆ ಗುತ್ತಿಗೆದಾರರು ಇವರು ನಮೂದಿಸಿರುವ ಮೊತ್ತ ರೂ.2,46,75,122–00ಗಳು ಅತಿ ಕಡಿಮೆ ಮೊತ್ತವಾಗಿದ್ದು, ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 24.40ರಷ್ಟು ಹೆಚ್ಚಾಗಿದೆ. ಈ ಕಾಮಗಾರಿಯನ್ನು ತಕ್ಷಣವೇ ಕೈಗೊಳ್ಳುವ ಅಗತ್ಯವಿದ್ದುದರಿಂದ, ದಿನಾಂಕ 15/07/09ರಂದು ನಡೆದ ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯಲ್ಲಿ ಸಮಿತಿಯ ಅಧ್ಯಕ್ಷರ ಅನುಮತಿಯೊಂದಿಗೆ ಟೆಂಡರ್‌ನ್ನು ಪರಿಶೀಲಿಸ ಲಾಗಿದ್ದು, ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ.1,98,34,345–00ಗಳ ಮೇಲೆ ಶೇಕಡ 14.90ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.2,27,89,662–00ಗಳಿಗೆ ಕಾಮಗಾರಿಯನ್ನು ಶ್ರೀ ಎಸ್.ಎಸ್.ಆಲೂರ, 1ನೇ ದರ್ಜೆ ಗುತ್ತಿಗೆದಾರರು, ಬೆಂಗಳೂರು ಇವರಿಗೆ ವಹಿಸಲು ಸಮಿತಿಯು ತೀರ್ಮಾನಿಸಿರುವುದಾಗಿ ತಿಳಿಸಿ ಟೆಂಡರ್‌ನ್ನು ಅಂಗೀಕರಿಸಲು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್‌ರವರು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ದಿನಾಂಕ 15/07/09ರ ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ನಡವಳಿಗಳನ್ನು ಮೇಲೆ 3ರಲ್ಲಿ ಓದಲಾದ ಪತ್ರದೊಂದಿಗೆ ಸ್ವೀಕರಿಸಲಾಗಿದ್ದು, ನಡವಳಿಗಳನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 50 ಅಪಿಬಂ 2009, ಬೆಂಗಳೂರು, ದಿನಾಂಕ: 11ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಾಗಲಕೋಟೆ ಜಿಲ್ಲೆ, ಮುಧೋಳ ತಾಲ್ಲೂಕು, ಭಂಟನೂರ ಚಿಕ್ಕೂರ ಗ್ರಾಮಗಳ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 1,98,34,345/–ಗಳ ಮೇಲೆ ಶೇಕಡ 14.90ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 2,27,89,662/–ಗಳಿಗೆ (ಎರಡು ಕೋಟಿ ಇಪ್ಪತ್ತೇಳು ಲಕ್ಷದ ಎಂಬಂತ್ತೊಂಬತ್ತು ಸಾವಿರದ ಆರುನೂರ ಅರವತ್ತಾ ಎರಡು ರೂ.ಗಳು ಮಾತ್ರ) ಶ್ರೀ ಎಸ್.ಎಸ್.ಆಲೂರ, 1ನೇ ದರ್ಜೆ ಗುತ್ತಿಗೆದಾರರು, ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2038

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಬಾಗಲಕೋಟೆ ಜಿಲ್ಲೆ, ಬಾದಾಮಿ ತಾಲ್ಲೂಕು, ಜಾಲಿಹಾಳ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಸನೀಇ 15 ಮಸಾವಿ 2009 ದಿನಾಂಕ 20.02.2009.
2. ದಿನಾಂಕ 09.07.2009ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂಖ್ಯೆ: ಮುಇಂ/ ಸನೀ(ಉ)ವಲಯ/ ಬಿಜೆಪಿ/ ಎಇ–6/ 2009–10/4000.
3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ(ದಕ್ಷಿಣ)ವಲಯ, ಬೆಂಗಳೂರು ರವರ ದಿನಾಂಕ 16.07.2009ರ ಪತ್ರ ಸಂಖ್ಯೆ: ಮುಸದ/ ಆಪ್ತಶಾಖೆ/ ಟೆಂಡರ್/ 08–09/1726.

**ಪ್ರಸ್ತಾವನೆ:**

ಬಾಗಲಕೋಟೆ ಜಿಲ್ಲೆ, ಬಾದಾಮಿ ತಾಲ್ಲೂಕು, ಜಾಲಿಹಾಳ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯ 85.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ(1)ರಲ್ಲಿ ಓದಲಾದ ದಿನಾಂಕ 20/02/09ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಜಿಲ್ಲಾ ಟೆಂಡರ್ ಬುಲೆಟಿನ್ | ದಿ:28/02/09 |
| 2 | ಸಂಯುಕ್ತ ಕರ್ನಾಟಕ ದಿನಪತ್ರಿಕೆ | ದಿ:01/03/09 |
| 3 | ವಿಜಯ ಕರ್ನಾಟಕ ದಿನಪತ್ರಿಕೆ | ದಿ:01/03/09 |

ಈ ಟೆಂಡರ್ ಕರೆಗೆ ಪ್ರತಿಕ್ರಿಯಿಸಿ ಖಾಲಿ ಟೆಂಡರ್ ಫಾರಂ ಪಡೆದ 3 ಜನ ಗುತ್ತಿಗೆದಾರರ ಪೈಕಿ ನಿಗದಿತ ದಿನದಂದು ಇಬ್ಬರು ಗುತ್ತಿಗೆದಾರರು ಮಾತ್ರ ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ತಾಂತ್ರಿಕ ಬಿಡ್ ಅನ್ನು ದಿನಾಂಕ 23/05/09ರಂದು ತೆರೆಯಲಾಗಿ ಒಬ್ಬರು ಗುತ್ತಿಗೆದಾರರ ಟೆಂಡರುಗಳು ಮಾತ್ರ ಅರ್ಹವಾಗಿದ್ದು, ಅವರ ಆರ್ಥಿಕ ಬಿಡ್‌ಗಳನ್ನು ದಿನಾಂಕ 23/05/09ರಂದು ತೆರೆಯಲಾಗಿದೆ. ಆರ್ಥಿಕ ಬಿಡ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ **80,47,832/–** |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | | | | ರೂ **78,36,577/–** |
| ಕ್ರ.ಸಂ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
| 1 | ಸಿ.ಕೆ. ಒಂಟಗುಡಿ | **94,14,319/–** | **16.97 ಹೆಚ್ಚು** | **20.13 ಹೆಚ್ಚು** |

ಮೇಲ್ಕಂಡಂತೆ ಕ್ರ.ಸಂ:1ರಲ್ಲಿರುವ ಶ್ರೀ ಸಿ.ಕೆ. ಒಂಟಗುಡಿ, 1ನೇ ದರ್ಜೆ ಗುತ್ತಿಗೆದಾರರು ಇವರು ನಮೂದಿಸಿರುವ ಮೊತ್ತ ರೂ. 94,14,319/–ಗಳು ಅತಿ ಕಡಿಮೆ ಮೊತ್ತವಾಗಿದ್ದು, ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 20.13ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 15/07/09ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 78,36,577/–ಗಳ ಮೇಲೆ ಶೇಕಡ 14.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.89,72,881/–ಗಳಿಗೆ ಕಾಮಗಾರಿಯನ್ನು ಶ್ರೀ ಸಿ.ಕೆ. ಒಂಟಗುಡಿ, 1ನೇ ದರ್ಜೆ ಗುತ್ತಿಗೆದಾರರು, ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 36 ಅಪಿಬಂ 2009, ಬೆಂಗಳೂರು, ದಿನಾಂಕ: 24ನೇ ಜುಲೈ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಾಗಲಕೋಟೆ ಜಿಲ್ಲೆ, ಬಾದಾಮಿ ತಾಲ್ಲೂಕು, ಜಾಲಿಹಾಳ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 78,36,577/–ಗಳ ಮೇಲೆ ಶೇಕಡ 14.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 89,72,881/–ಗಳಿಗೆ (ಎಂಬತ್ತೊಂಬತ್ತು ಲಕ್ಷದ ಎಪ್ಪತ್ತೆರಡು ಸಾವಿರದ ಎಂಟುನೂರ ಎಂಬತ್ತೊಂದು ರೂ.ಗಳು ಮಾತ್ರ) ಶ್ರೀ ಸಿ.ಕೆ. ಒಂಟಗುಡಿ, 1ನೇ ದರ್ಜೆ ಗುತ್ತಿಗೆದಾರರು, ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

ಸರ್ಕಾರಿ ಆದೇಶ ಸಂಖ್ಯೆ:ಸಿಐ 76 ಎಂಜಿಎಸ್ 2008, ದಿನಾಂಕ:18–08–2009 ರ ಅನುಬಂಧ

| ಕ್ರ.ಸಂ. | ಹುದ್ದೆಯ ವಿವರ | ಹೊಸಕಛೇರಿಗಳ ಸ್ಥಾಪನೆ | | | | ಖನಿಜ ಕಛೇರಿಗಳನ್ನು ಬಲಪಡಿಸುವುದು | | | | ಅಂತರ್ಜಲ ವಿಭಾಗಗಳನ್ನು ಬಲಪಡಿಸುವುದು | | ಒಟ್ಟು |
|---|---|---|---|---|---|---|---|---|---|---|---|---|
| | | ಉಡುಪಿ | ದಾವಣಗೆರೆ | ಹಾವೇರಿ | ಗದಗ | ರಾಮನಗರ | ಚಾಮರಾಜ–ನಗರ | ಬಾಗಲಕೋಟೆ (ಇಳಕಲ್) | ಕೊಪ್ಪಳ | ರಾಯಚೂರು | ಬೀದರ್ | |
| | **I. ಆರ್ಥಿಕ ಇಲಾಖೆಯ ಅನುಮೋದಿಸಿರುವಂತೆ ಸೃಷ್ಟಿಸಿರುವ ಹೊಸ ಹುದ್ದೆಗಳು** | | | | | | | | | | | |
| 1. | ಭೂವಿಜ್ಞಾನಿ | 2 | 2 | 2 | 2 | 1 | 1 | 1 | 1 | 1 | 1 | 14 |
| 2. | ಸಹಾಯಕ ಇಂಜಿನಿಯರ್ | | | | | | | 1 | 1 | | | 02 |
| 3. | ಕಿರಿಯ ಇಂಜಿನಿಯರ್ | 1 | 1 | 1 | 1 | | 1 | | | 1 | | 06 |
| 4. | ಅಧೀಕ್ಷಕರು | 1 | 1 | 1 | 1 | | | | | | | 04 |
| | **(i) ಒಟ್ಟು** | **4** | **4** | **4** | **4** | **1** | **2** | **2** | **2** | **2** | **1** | **26** |
| **II. ಬಾಹ್ಯಮೂಲದಿಂದ ಸೇವೆಯನ್ನು ಪಡೆಯುವಿಕೆ (ಯಾವುದೇ ಹುದ್ದೆಗಳನ್ನು ಸೃಷ್ಟಿಸದೇ)** | | | | | | | | | | | | |
| 5. | ದ್ವಿ.ದ.ಸ. | 1 | 1 | 1 | 1 | | | | | | | 04 |
| 6. | ಬೆರಳಚ್ಚುಗಾರರು / ಡಾಟಾ ಎಂಟ್ರಿ ಆಪರೇಟರ್ | 1 | 1 | 1 | 1 | | | | | | | 04 |
| 7. | ವಾಹನಚಾಲಕ | 1 | 1 | 1 | 1 | 1 | 1 | 1 | 1 | | | 08 |
| 8. | ಗ್ರೂಪ್ –ಡಿ | 2 | 2 | 2 | 2 | | | | | | | 08 |
| | **(ii) ಒಟ್ಟು** | **5** | **5** | **5** | **5** | **1** | **1** | **1** | **1** | | | **24** |
| **III. Redeployment ಮೂಲಕ** | | | | | | | | | | | | |
| 9. | ಹಿರಿಯ ಭೂವಿಜ್ಞಾನಿ | 1 | 1 | 1 | 1 | | | | | | | 04 |

**ಎ.ಪಿ. ರಾಮಕೃಷ್ಣ**
ಪೀಠಾಧಿಕಾರಿ(ಗಣಿ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್. 1966

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ:** ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರವಿದ್ಯಾ ಮಂಡಳಿಯ ರಾಜ್ಯ ಪರಿಷತ್ತು ಮತ್ತು ಕಾರ್ಯಕಾರಿ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ವಿಯಇ 92 ವಿತ್ರಮ 2003(II) ದಿನಾಂಕ:28/09/2004.

2) ಪತ್ರ ಸಂಖ್ಯೆ:ಡಿಎಸ್‌ಟಿ 170 ಎಸ್ ಟಿ ಎಸ್ 2007, ದಿನಾಂಕ:09/01/2008.

3) ದಿನಾಂಕ:20/11/2008 ರಂದು ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರವಿದ್ಯಾ ಮಂಡಳಿಯ ಕಾರ್ಯಕಾರಿ ಸಮಿತಿಯ ತಿರ್ಮಾನ.

4) ಸರ್ಕಾರಿ ಆದೇಶ ಸಂಖ್ಯೆ: ವಿ ಯ ಇ 14 ವಿತ್ರಮ 2008 (1), ದಿನಾಂಕ:01.08.2009.

**ಪ್ರಸ್ತಾವನೆ:**

ಓದಲಾದ (1)ರ ಸರ್ಕಾರಿ ಆದೇಶದಲ್ಲಿ ದಿನಾಂಕ:28/09/2004 ರಿಂದ ಮೂರು ವರ್ಷದ ಅವಧಿಗೆ ಜಾರಿಗೆ ಬರುವಂತೆ ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರವಿದ್ಯಾ ಮಂಡಳಿಯ ನಿಯಮಗಳು ಮತ್ತು ನಿಬಂಧನೆಗಳ ಮೇರೆಗೆ ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರವಿದ್ಯಾ ಮಂಡಳಿಯನ್ನು ಹಾಗೂ ಅದರ ಕಾರ್ಯಕಾರಿ ಸಮಿತಿಯನ್ನು ರಚಿಸಲಾಗಿತ್ತು. ದಿನಾಂಕ:27/09/2007ಕ್ಕೆ ಮೂರು ವರ್ಷಗಳ ಅವಧಿಯು ಅಂತ್ಯಗೊಂಡಿರುವುದರಿಂದ ಮೇಲೆ ಓದಲಾದ (2)ರ ಪತ್ರದಲ್ಲಿ ಮಂಡಳಿಯ ರಾಜ್ಯ ಪರಿಷತ್ ಮತ್ತು ಕಾರ್ಯಕಾರಿ ಸಮಿತಿಯನ್ನು ಪುನರ್ ರಚಿಸುವವರೆಗೆ ರಾಜ್ಯ ಸಮಿತಿ ಸಭೆಗಳನ್ನು ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆಸಬಹುದೆಂದು ಮತ್ತು ಕಾರ್ಯಕಾರಿ ಸಮಿತಿಯ ಸಭೆಗಳನ್ನು ನಿರ್ದೇಶಕರು ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರು. ಇವರ ಅಧ್ಯಕ್ಷತೆಯಲ್ಲಿ ನಡೆಸಿ ಅಧಿಕಾರೇತರ ಸದಸ್ಯರ ಗೈರು ಹಾಜರಿಯಲ್ಲಿ ತಿರ್ಮಾನವನ್ನು ಕೈಗೊಳ್ಳಬಹುದೆಂದು ತಿಳಿಸಲಾಗಿದೆ. ಮೇಲೆ ಓದಲಾದ (3)ರ ನಡವಳಿಯಲ್ಲಿ ಸದರಿ ಆಡಳಿತ ಮಂಡಳಿ ಮತ್ತು ಅದರ ಕಾರ್ಯಕಾರಿ ಸಮಿತಿಯನ್ನು ಮೂರು ವರ್ಷಗಳ ಅವಧಿಗೆ ಪುನರ್ ರಚಿಸುವಂತೆ ತಿರ್ಮಾನಿಸಲಾಗಿದೆ.

ಮೇಲೆ (4) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರ ವಿದ್ಯಾಮಂಡಳಿಯ ಕಾರ್ಯದರ್ಶಿಯ ಹುದ್ದೆಗೆ ಪ್ರೊ.ಎಂ.ಎಸ್.ಮೋಹನ್‌ಕುಮಾರ್ Department of Civil Engineering, ಭಾರತೀಯ ವಿಜ್ಞಾನ ಸಂಸ್ಥೆ ಬೆಂಗಳೂರು, ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ನೇಮಿಸಿ ಆದೇಶಿಸಿದೆ.

ರಾಜ್ಯದಲ್ಲಿ ರಾಷ್ಟ್ರಪತಿಯ ಆಡಳಿತ ಜಾರಿಯಲ್ಲಿದ್ದು, ಸಕಾಲದಲ್ಲಿ ರಾಜ್ಯ ಪರಿಷತ್ ಸಮಿತಿ ಮತ್ತು ಕಾರ್ಯಕಾರಿ ಸಮಿತಿಯ ಸದಸ್ಯರನ್ನು ನೇಮಕ ಮಾಡಲಾಗಲಿಲ್ಲ. ಈಗ ರಾಜ್ಯದಲ್ಲಿ ಸರ್ಕಾರ ರಚನೆಯಾಗಿರುವ ಹಿನ್ನಲೆಯಲ್ಲಿ ಮಂಡಳಿಯ ರಾಜ್ಯ ಪರಿಷತ್ತು ಮತ್ತು ಕಾರ್ಯಕಾರಿ ಸಮಿತಿಯನ್ನು ಪುನರ್ ರಚಿಸುವ ಪ್ರಸ್ತಾವನೆಯನ್ನು ಸರ್ಕಾರದ ಹಂತದಲ್ಲಿ ಸಮಗ್ರವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಿಯಇ 14 ವಿತ್ರಮ 2008, ಬೆಂಗಳೂರು, ದಿನಾಂಕ: 1ನೇ ಆಗಸ್ಟ್ 2009**

ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರವಿದ್ಯಾ ಮಂಡಳಿಯ ಮೆಮೋರಂಡಮ್ ಆಫ್ ಅಸೋಸಿಯೇಷನ್ ಮತ್ತು ರೂಲ್ಸ್ ಆಂಡ್ ರೆಗ್ಯುಲೇಷನ್ ಮೆಮೋರೆಂಡಂ ಆಫ್ ಅಸೋಸಿಯೇಷನ್ ಪ್ರಕಾರ ರಾಜ್ಯ ಪರಿಷತ್ತು ಮತ್ತು ಕಾರ್ಯಕಾರಿ ಸಮಿತಿಯ ಅವಧಿಯು ಮೂರು ವರ್ಷಗಳಾಗಿದ್ದು, ಈ ಆದೇಶವನ್ನು ಹೊರಡಿಸಿದ ದಿನಾಂಕದಿಂದ ಮುಂದಿನ ಮೂರು ವರ್ಷಗಳ ಅವಧಿಗೆ ಜಾರಿಯಲ್ಲಿರುವಂತೆ ಕನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರವಿದ್ಯಾ ಮಂಡಳಿಯ ರಾಜ್ಯ ಪರಿಷತ್ ಮತ್ತು ಅದರ ಕಾರ್ಯಕಾರಿ ಸಮಿತಿಯನ್ನು ಕ್ರಮವಾಗಿ ಅನುಬಂಧ–1 ಮತ್ತು ಅನುಬಂಧ–2 ರಲ್ಲಿರುವಂತೆ ಪುನರ್ ರಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಬೋರಲಿಂಗಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

**Annexure - I (ಅನುಬಂಧ–1)**

**Annexure to G.O.No.ವಿಯಇ 14 ವಿತ್ರಮ 2008 (II) ದಿನಾಂಕ: 01.08.2009**

**Karnataka State Council for Science & Technology (KSCST)**

**Members of Governing Council**

| | | |
|---|---|---|
| 01. | Hon'ble Chief Minister<br>Government of Karnataka<br>Vidhana Soudha, Bangalore – 560 001. | President |

| | | |
|---|---|---|
| 02. | Hon'ble Minister for Finance<br>Vidhana Soudha, Bangalore – 560 001. | Vice-President |
| 03. | The Director<br>Indian Institute of Science<br>Bangalore – 560 012. | Vice-President |
| 04. | Hon'ble Minister for Science & Technology<br>Government of Karnataka<br>Vidhana Soudha, Bangalore – 560 001. | Vice-President |
| 05. | Hon'ble Minister for Higher Education<br>Government of Karnataka<br>Vidhana Soudha, Bangalore – 560 001. | Member |
| 06. | Hon'ble Minister for Health & Family Welfare<br>Government of Karnataka<br>Vidhana Soudha, Bangalore – 560 001. | Member |
| 07. | Hon'ble Minister for Agriculture &<br>Animal Husbandry<br>Government of Karnataka<br>Vidhana Soudha, Bangalore – 560 001. | Member |
| 08. | Hon'ble Minister for Energy<br>Government of Karnataka<br>Vidhana Soudha, Bangalore – 560 001. | Member |
| 09. | Secretary or his nominee<br>Dept. of Science & Technology<br>Government of India<br>Technology Bhavan<br>New Mehrauli Road, New Delhi – 110 016. | Member |
| 10. | The Vice-Chancellor<br>Women's university Bijapur. | Member |
| 11. | The Vice-Chancellor<br>Mysore University Manasagangothri<br>Mysore – 570 005. | Member |
| 12. | The Vice-Chancellor<br>Bangalore university<br>Jnanabharathi, Bangalore. | Member |
| 13. | The Vice-Chancellor<br>Gulbarga University Gulbarga. | Member |
| 14. | The Vice-Chancellor<br>University of Agricultural Sciences<br>Bangalore. | Member |
| 15. | The Vice-Chancellor<br>University of Agricultural Sciences<br>Dharwad. | Member |
| 16. | The Chief Secretary to Government<br>Government of Karnataka<br>Vidhana Soudha, Bangalore – 560 001. | Member |

| | | |
|---|---|---|
| 17. | The Additional Chief Secretary and<br>Development Commissioner<br>Government of Karnataka<br>Vidhana Soudha, Bangalore – 560 001. | Member |
| 18. | The Principal Secretary<br>Finance Department<br>Government of Karnataka<br>Vidhana Soudha, Bangalore – 560 001. | Member |
| 19. | The Principal Secretary<br>Department of Planning<br>Government of Karnataka<br>M.S.Building, Bangalore – 560 001. | Member |
| 20. | The Principal Secretary<br>Dept. of Information Technology,<br>Biotechnology & Science and Technology<br>Government of Karnataka<br>M.S.Building, Bangalore – 560 001. | Member |
| 21. | The Principal Secretary<br>Dept. of Rural Development & Panchayat Raj<br>Government of Karnataka<br>M.S.Building, Bangalore – 560 001. | Member |
| 22. | The Principal Secretary<br>Dept. of Higher Education<br>Government of Karnataka<br>M.S.Building, Bangalore – 560 001. | Member |
| 23. | The Principal Secretary<br>Dept. of Forest, Ecology & Environment<br>Government of Karnataka<br>M.S.Building, Bangalore – 560 001. | Member |
| 24. | The Chairman<br>Indian Space Research Organisation<br>Antariksh Bhavan, New BEL Road<br>Bangalore – 560 094. | Member |
| 25. | The Director<br>Central Food Technological Research Institute<br>Mysore – 570 013. | Member |
| 26. | The Director<br>Indian Institute of Management<br>Bannerghatta Road<br>Bangalore – 560 076. | Member |
| 27. | The Director<br>Institute for Social & Economic Change<br>Nagarbhavi Post, Bangalore – 560 072. | Member |

| | | |
|---|---|---|
| 28. | The Chairman<br>Centre for Sustainable Development<br>(formerly ASTRA)<br>Indian Institute of Science<br>Bangalore – 560 012. | Member |
| 29. | The Director<br>National Institute of Advanced Studies<br>Indian Institute of Science<br>Bangalore – 560 012. | Member |
| 30. | The Director<br>National Aerospace Laboratories<br>Bangalore – 560 017. | Member |
| 31. | The Director<br>National Institute of Technology – Karnataka<br>Surathkal, Srinivasanagar<br>Dakshina Kannada District. | Member |
| 32. | The Director<br>Indian Institute of Information Technology<br>ITPL Tower, Whitefield, Bangalore – 560 066. | Member |
| 33. | The Vice Chancellor<br>Visvesvaraya Technological University<br>KLE Hospital Compound<br>Shivabasavanagar, Belgaum – 590 010. | Member |
| 34. | The Vice Chancellor<br>Rajiv Gandhi University of Health<br>Sciences - Karnataka<br>4th T Block, Jayanagar, Bangalore – 560 041. | Member |
| 35. | The Director<br>Raman Research Institute<br>Sir C.V.Raman Avenue, Bangalore – 560 012. | Member |
| 36. | The Director<br>Karnataka State Remote Sensing<br>Application Centre (KSRSAC)<br>M.S.Building, Bangalore. | Member |
| 37. | The Director<br>Ashoka Trust for Research in Ecology<br>No.659, 5th A Main, Hebbal<br>Bangalore – 560 094. | Member |
| 38. | The Chairman<br>Karnataka State Pollution Control Board<br>No.49, Parisara Bhavan<br>Church Street, Bangalore – 560 001. | Member |
| 39. | Dr.Arcot Ramachandran<br>No.3, Crescent Road<br>Bangalore – 560 001. | Member |

| | | |
|---|---|---|
| 40. | Prof.B.N.Raghunandan<br>Chairman<br>Dept.of Aerospace Engineering<br>Indian Institute of Science<br>Bangalore – 560 012. | Member |
| 41. | Prof.J Srinivasan<br>Dean, Division of Mechanical Sciences<br>Indian Institute of Science<br>Bangalore – 560 012. | Member |
| 42. | Prof.M.S.Mohankumar<br>Dept.of Civil Engineering<br>Indian Institute of Science, Bangalore – 560 012. | Member-Secretary |

**ಕೆ. ಬೋರಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

**Annexure - II (ಅನುಬಂಧ–2)**

**Annexure to G.O.No.ವಿಯಇ 14 ವಿತ್ರಮ 2008 (II) ದಿನಾಂಕ: 01.08.2009**

**Karnataka State Council for Science & Technology (KSCST)**

**Members of Executive Committee**

| | | |
|---|---|---|
| 01. | The Director<br>Indian Institute of Science, Bangaloe – 560 012. | Chairman |
| 02. | Secretary or his nominee<br>Dept. of Science & Technology<br>Government of India<br>Technology Bhavan<br>New Mehrauli Road, New Delhi – 110 016. | Member |
| 03. | Chief Secretary<br>Government of Karnataka<br>Vidhana Soudha, Bangalore – 560 001. | Member |
| 04. | The Additional Chief Secretary and<br>Development Commissioner<br>Government of Karnataka<br>Vidhana Soudha, Bangalore – 560 001. | Member |
| 05. | The Principal Secretary<br>Dept.of Planning<br>Government of Karnataka<br>M.S.Building, Bangalore – 560 001. | Member |
| 06. | The Principal Secretary<br>Dept.of Information Technology,<br>Biotechnology and Science & Technology<br>Government of Karnataka<br>M.S.Building, Bangalore – 560 001. | Member |
| 07. | Vice Chancellor<br>Visvesvaraya Technological University<br>Belgaum. | Member |

| | | |
|---|---|---|
| 08. | The Vice Chancellor<br>Bangalore University<br>Jnanabharathi, Bangalore. | Member |
| 09. | The Vice Chancellor<br>University of Agricultural Sciences<br>Dharwad. | Member |
| 10. | Director<br>Ashoka Trust for Research in Ecology<br>No.659,5th A Main, Hebbal<br>Bangalore – 560 024. | Member |
| 11. | Dr.Arcot Ramachandran<br>No.3, Crescent Road<br>Bangalore – 560 001. | Member |
| 12. | Prof. J.Srinivasan<br>Dean, Division of Mechanical Sciences<br>Indian Institute of Science, Bangalore – 560 012. | Member |
| 13. | Prof.B.N.Raghunandan<br>Chairman<br>Dept.of Aerospace Engineering<br>Indian Institute of Science, Bangalore – 560 012. | Member |
| 14. | Prof.M.S.Mohankumar<br>Dept.of Civil Engineering<br>Indian Institute of Science, Bangalore – 560 012. | Member-Secretary |

**ಕೆ. ಬೋರಲಿಂಗಯ್ಯ**

ಪಿ.ಆರ್. 1836 ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

### ತಿದ್ದೋಲೆ

**ಸಂ. ಕಸಂವಾಪ್ರ 85 ಕಸನಿ 2009, ಬೆಂಗಳೂರು, ದಿನಾಂಕ: 31ನೇ ಜುಲೈ 2009**

ಸರ್ಕಾರದ ಅಧಿಸೂಚನೆ ಸಂಖ್ಯೆ ಕಸಂವಾಪ್ರ 85 ಕಸನಿ 2009 ದಿನಾಂಕ: 30.07.2009ರ ಭಾಗ–1ರಲ್ಲಿನ "ಅಲ್ಲಿಯವರೆಗೆ ನಿಯೋಜನೆ ಮೇರೆಗೆ ನೇಮಿಸಲಾಗಿದೆ" ಎಂಬುದನ್ನು "ಅಲ್ಲಿಯವರೆಗೆ ಅವರ ಸ್ವಂತ ವೇತನ ಮತ್ತು ದರ್ಜೆಯ ಮೇಲೆ ನಿಯೋಜಿಸಲಾಗಿದೆ" ಎಂದು ದಿನಾಂಕ: 30.07.2009 ರಿಂದಲೇ ಜಾರಿಗೆ ಬರುವಂತೆ ತಿದ್ದುಪಡಿ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಭರ್ಮರಾಜಪ್ಪ**

ಪಿ.ಆರ್. 1870 ಸರ್ಕಾರದ ಅಧಿನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

### ತಿದ್ದುಪಡಿ ಆದೇಶ

**ಸಂಖ್ಯೆ: ಕಸಂವಾಪ್ರ 38 ಸ್ವೀಮರ 2009, ಬೆಂಗಳೂರು, ದಿನಾಂಕ: 4ನೇ ಆಗಸ್ಟ್ 2009**

ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 38 ಸ್ವೀಮರ 2009ರ ದಿನಾಂಕ: 27.06.2009ನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಅದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಭರ್ಮರಾಜಪ್ಪ**

ಪಿ.ಆರ್. 1871 ಸರ್ಕಾರದ ಅಧಿನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

**ತಿದ್ದುಪಡಿ ಆದೇಶ**

**ಸಂಖ್ಯೆ : ಕಸಂವಾಪ್ರ 63 ಸ್ವೀಮರ 2009, ಬೆಂಗಳೂರು, ದಿನಾಂಕ: 4ನೇ ಆಗಸ್ಟ್ 2009**

ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 63 ಸ್ವೀಮರ 2009ರ ದಿನಾಂಕ: 23.06.2009ನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಭರ್ಮರಾಜಪ್ಪ**

ಪಿ.ಆರ್. 1872 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

**ತಿದ್ದುಪಡಿ ಆದೇಶ**

**ಸಂ. ಕಸಂವಾಪ್ರ 21 ಸ್ವೀಮರ 2009, ದಿನಾಂಕ: 30ನೇ ಜುಲೈ 2009**

ದಿನಾಂಕ: 27.06.2009ರ ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 21 ಸ್ವೀಮರ 2009ರ ಸರ್ಕಾರದ ಆದೇಶದ ಕಂಡಿಕೆ (2) ರಲ್ಲಿ ನಮೂದಿಸಿರುವ **ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 6 ಡಿಎಸ್ ವೈ 2008, ದಿ: 10.10.2008**ರ ಬದಲಿಗೆ ಈ ಕೆಳಗಿನಂತೆ ಓದಿಕೊಳ್ಳತಕ್ಕದ್ದು.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 6 ಡಿಎಸ್ ವೈ 2008, ದಿ: 18.05.2009**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಭರ್ಮರಾಜಪ್ಪ**

ಪಿ.ಆರ್. 1873 ಸರ್ಕಾರದ ಅಧಿನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** 2009–10ನೇ ಸಾಲಿನಲ್ಲಿ ರಾಜ್ಯ ಆಯುಷ್ ಇಲಾಖೆಯ ಅಡಿಯಲ್ಲಿ ಬರುವ ಖಾಸಗಿ ಆಯುರ್ವೇದ, ಹೋಮಿಯೋಪತಿ, ಯುನಾನಿ, ಯೋಗ ಮತ್ತು ನ್ಯಾಚುರೋಪತಿ ಮಹಾವಿದ್ಯಾಲಯಗಳಲ್ಲಿ ಸ್ನಾತಕೋತ್ತರ/ಸ್ನಾತಕ ಪೂರ್ವ ಕೋರ್ಸುಗಳ ಪ್ರವೇಶ ನೀತಿಯಲ್ಲಿ ಸೀಟುಗಳ ಹಂಚಿಕೆ ಮತ್ತು ಪ್ರವೇಶ/ಬೋಧನಾ ಶುಲ್ಕವನ್ನು ನಿಗದಿಗೊಳಿಸುವ ಬಗ್ಗೆ.

**ಓದಲಾಗಿದೆ:** (1) ಸರ್ಕಾರಿ ಆದೇಶ ಸಂಖ್ಯೆ : ಆಕುಕ 27 ಪಿಟಿಡಿ 2008, ದಿನಾಂಕ : 14.05.2008.

(2) ಆಯುಷ್ ನಿರ್ದೇಶಕರ ಪತ್ರ ಸಂಖ್ಯೆ : ಆಯುಷ್:59/ಅಭಿವೃದ್ಧಿ (2)/08–09 ದಿನಾಂಕ 18.05.09

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ ಸಂ. (1) ರಲ್ಲಿನ ಸರ್ಕಾರದ ಆದೇಶದಲ್ಲಿ ಆಯುಷ್ ಇಲಾಖೆಯ ಅಡಿಯಲ್ಲಿ ಕೋರ್ಸುಗಳ ಬಗ್ಗೆ ಖಾಸಗಿ ಅನುದಾನಿತ ಮತ್ತು ಅನುದಾನರಹಿತ ಆಯುಷ್ ಮಹಾವಿದ್ಯಾಲಯಗಳಲ್ಲಿ ಸೀಟು ನಿಗದಿಗೊಳಿಸಿ ಆದೇಶ ಹೊರಡಿಸಿದೆ.

ಮೇಲೆ ಓದಲಾದ ಕ್ರ. ಸಂ. (2) ರಲ್ಲಿ ನಿರ್ದೇಶಕರು, ಆಯುಷ್ ಇಲಾಖೆರವರ ಪತ್ರದಲ್ಲಿ 2008–09ನೇ ಸಾಲಿನಲ್ಲಿ ಖಾಸಗಿ ಆಯುಷ್ ವೈದ್ಯಕೀಯ ಸಂಸ್ಥೆಗಳ ಪ್ರತಿನಿಧಿಗಳೊಂದಿಗೆ ನಡೆಸಿದ ಸಭೆಯ ನಡವಳಿಗಳಲ್ಲಿ ತೀರ್ಮಾನಿಸಿ, ಪದವಿ ಕೋರ್ಸಿಗೆ ಶೇಕಡ 20:80 ಹಾಗೂ ಸ್ನಾತಕೋತ್ತರ ಪದವಿಗೆ ಶೇಕಡ 25:75 ಸೀಟು ಹಂಚಿಕೆ /ಬೋಧನಾ ಶುಲ್ಕವನ್ನು ನಿಗದಿಪಡಿಸಿ ಆದೇಶ ಹೊರಡಿಸಲಾಗಿದ್ದು, 2008–09ನೇ ಸಾಲಿನಲ್ಲಿ ನಿಗದಿಪಡಿಸಿದ ರೀತಿಯಲ್ಲಿಯೇ ಪ್ರಸ್ತುತ ಇರುವ ಸೀಟು ಹಂಚಿಕೆಯನ್ನು/ಬೋಧನಾ ಶುಲ್ಕವನ್ನು 2009–10ನೇ ಸಾಲಿಗೂ ಮುಂದುವರೆಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 142 ಪಿಟಿಡಿ 2009, ಬೆಂಗಳೂರು, ದಿನಾಂಕ: 23ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ 2009–10ನೇ ಸಾಲಿನಲ್ಲಿ ಆಯುಷ್ ಇಲಾಖೆ ಅಡಿಯಲ್ಲಿ ಬರುವ ರಾಜ್ಯದ ಖಾಸಗಿ ಆಯುರ್ವೇದ, ಹೋಮಿಯೋಪತಿ, ಯುನಾನಿ, ಪ್ರಕೃತಿ ಚಿಕಿತ್ಸೆ ಮತ್ತು ಯೋಗ ವೈದ್ಯಕೀಯ ಮಹಾವಿದ್ಯಾಲಯಗಳಲ್ಲಿ ಸ್ನಾತಕೋತ್ತರ ಮತ್ತು ಸ್ನಾತಕಪೂರ್ವ ಕೋರ್ಸುಗಳ ಪ್ರವೇಶ ಪರೀಕ್ಷೆ ಸೀಟುಗಳ ಹಂಚಿಕೆ ಮತ್ತು ಬೋಧನಾ ಶುಲ್ಕವನ್ನು ನಿಗದಿಗೊಳಿಸುವ ಬಗ್ಗೆ ಈ ಕೆಳಗಿನಂತೆ ಕ್ರಮ ತೆಗೆದುಕೊಳ್ಳಲು ಸರ್ಕಾರವು ಆದೇಶಿಸಿದೆ.

1. ಸ್ನಾತಕ ಪೂರ್ವ ಕೋರ್ಸುಗಳಿಗೆ ಸಂಬಂಧಪಟ್ಟಂತೆ, ಸರ್ಕಾರದಿಂದ ಅನುದಾನ ಪಡೆಯುತ್ತಿರುವ ಖಾಸಗಿ ಅನುದಾನಿತ ಕಾಲೇಜುಗಳಲ್ಲಿ ಮತ್ತು ಅನುದಾನರಹಿತ ಕಾಲೇಜುಗಳಲ್ಲಿ BAMS, BHMS, BUMS, BNYS ಕೋರ್ಸುಗಳಿಗೆ ಸಂಬಂಧಪಟ್ಟಂತೆ ಸೀಟುಗಳ ಹಂಚಿಕೆ ಮತ್ತು ಆಯ್ಕೆಯನ್ನು ಈ ಕೆಳಗಿನಂತೆ ಮುಂದುವರೆಸಲು ಆದೇಶಿಸಿದೆ.

| ಸೀಟುಗಳ ಹಂಚಿಕೆ | ಸರ್ಕಾರಿ ಸೀಟುಗಳು | ಆಡಳಿತ ಮಂಡಳಿಯ ಸೀಟುಗಳು |
|---|---|---|
| (1) ಅನುದಾನಿತ ಕಾಲೇಜುಗಳಿಗೆ<br>(2) ಅನುದಾನರಹಿತ ಕಾಲೇಜುಗಳಿಗೆ | 80% (CET ಮೂಲಕ)<br>20% (CET ಮೂಲಕ) | 20% (ಮೆರಿಟ್ ಮೂಲಕ)<br>80% (ಮೆರಿಟ್ ಮೂಲಕ) |

2. ಸ್ನಾತಕ ಪೂರ್ವ ಕೋರ್ಸುಗಳಿಗೆ ಸಂಬಂಧಪಟ್ಟಂತೆ ಈ ಕೆಳಗಿನಂತೆ ಶುಲ್ಕವನ್ನು ಪ್ರತಿ ವಿದ್ಯಾರ್ಥಿಗಳಿಂದ ವಸೂಲಿ ಮಾಡಲು ಆದೇಶಿಸಿದೆ.

| | |
|---|---|
| ಅ) ಅನುದಾನಿತ ಕಾಲೇಜುಗಳಲ್ಲಿ ಸರ್ಕಾರಿ ಸೀಟುಗಳಿಗೆ | ರೂ. 15,000.00 (ಹದಿನೈದು ಸಾವಿರಗಳು ಮಾತ್ರ)<br>(ಈ ಮೊತ್ತದಲ್ಲಿ ರೂ. 4,410 (ನಾಲ್ಕು ಸಾವಿರದ ನಾಲ್ಕು ನೂರ ಹತ್ತು ಮಾತ್ರ) ರೂ. ಗಳನ್ನು ಅಭಿವೃದ್ಧಿ ಶುಲ್ಕವೆಂದು ಪರಿಗಣಿಸುವುದು) |
| ಆ) ಅನುದಾನರಹಿತ ಕಾಲೇಜುಗಳಲ್ಲಿ ಸರ್ಕಾರಿ ಸೀಟುಗಳಿಗೆ | ರೂ. 25,000.00 (ಇಪ್ಪತ್ತೈದು ಸಾವಿರ ರೂಪಾಯಿಗಳು ಮಾತ್ರ– |
| (3) ಆಡಳಿತ ಮಂಡಳಿಯ ಸೀಟುಗಳಿಗೆ | ರೂ. 1,00000.00 (ಒಂದು ಲಕ್ಷದವರೆಗೆ) |

3. ಸ್ನಾತಕೋತ್ತರ ಕೋರ್ಸುಗಳಿಗೆ ಸಂಬಂಧಪಟ್ಟಂತೆ ಈ ಕೆಳಗಿನಂತೆ ಸೀಟುಗಳ ಹಂಚಿಕೆಯನ್ನು ಯಥಾವತ್ತಾಗಿ ಮುಂದುವರೆಸಲಾಗಿದೆ.

| ಸೀಟುಗಳ ಹಂಚಿಕೆ | ಸರ್ಕಾರಿ ಸೀಟುಗಳು | ಆಡಳಿತ ಮಂಡಳಿಯ ಸೀಟುಗಳು |
|---|---|---|
| (1) ಅನುದಾನಿತ, ಅನುದಾನರಹಿತ ಕಾಲೇಜುಗಳಲ್ಲಿ | 25% (PGET ಮೂಲಕ) | 75% (CCIM/CCH) ಮಾರ್ಗ ಸೂಚಿಯ ಪ್ರಕಾರ ಅರ್ಹತೆಯ ಆಧಾರದ ಮೇಲೆ ಆಯ್ಕೆ ಮಾಡುವುದು |

4. ಸ್ನಾತಕೋತ್ತರ ಕೋರ್ಸುಗಳಿಗೆ ಸಂಬಂಧಪಟ್ಟಂತೆ ವಿದ್ಯಾರ್ಥಿಗಳಿಂದ ಈ ಕೆಳಗಿನಂತೆ ಶುಲ್ಕವನ್ನು ವಸೂಲಿ ಮಾಡಲು ಆದೇಶಿಸಲಾಗಿದೆ.

| **ಶುಲ್ಕ :** | |
|---|---|
| (1) ಅನುದಾನಿತ, ಅನುದಾನರಹಿತ ಕಾಲೇಜುಗಳಲ್ಲಿ ಸರ್ಕಾರಿ ಸೀಟುಗಳಿಗೆ | ರೂ. 50,000/– ಗಳು –1 ವರ್ಷಕ್ಕೆ (ಐವತ್ತು ಸಾವಿರ) |
| (2) ಅನುದಾನಿತ, ಅನುದಾನರಹಿತ ಕಾಲೇಜು ಆಡಳಿತ ಮಂಡಳಿಯ ಸೀಟುಗಳಿಗೆ | ರೂ. 2.00 ಲಕ್ಷಗಳು –1 ವರ್ಷಕ್ಕೆ (ಎರಡು ಲಕ್ಷಗಳು) (ಮೇಲ್ಮಿತಿ) |

5. ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು, ಇಲ್ಲಿ ಕೇಂದ್ರ ಸರ್ಕಾರವು ಪಂಚಕರ್ಮ ವಿಭಾಗದಲ್ಲಿ ಮಂಜೂರು ಮಾಡಿರುವ ಸೀಟುಗಳಿಗೆ ಹಾಗೂ ಮೈಸೂರಿನಲ್ಲಿ ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯದಲ್ಲಿ ಆಯುರ್ವೇದ ಸಿದ್ಧಾಂತ ವಿಷಯದಲ್ಲಿ ಕೇಂದ್ರ ಸರ್ಕಾರವು ಮಂಜೂರು ಮಾಡಿರುವ ಸೀಟುಗಳಿಗೆ ಕೇಂದ್ರ ಸರ್ಕಾರವು ಪೂರ್ಣ ಪ್ರಮಾಣದಲ್ಲಿ ಸಹಾಯಧನ ನೀಡಿರುವುದರಿಂದ ಶೇಕಡಾ 50% ರಷ್ಟು ಸೀಟುಗಳನ್ನು ಕರ್ನಾಟಕೇತರ ಅಭ್ಯರ್ಥಿಗಳಿಗೆ ಮೀಸಲಿಡಲು ಸೂಚಿಸಿದೆ.

6. ಸರ್ಕಾರಿ ಆಯುರ್ವೇದ ಕಾಲೇಜುಗಳಲ್ಲಿ ಸ್ನಾತಕೋತ್ತರ ಮತ್ತು ಸ್ನಾತಕ ಪೂರ್ವ ಕೋರ್ಸುಗಳಿಗೆ ಸಂಬಂಧಪಟ್ಟಂತೆ, ಸೀಟುಗಳ ಹಂಚಿಕೆ, ಪ್ರವೇಶದ ಆಯ್ಕೆ ಹಾಗೂ ಶುಲ್ಕವನ್ನು ಕಳೆದ ಸಾಲಿನಂತೆ ಹಾಗೂ ಜಾರಿಯಲ್ಲಿರುವ ನಿಯಮದಂತೆ ಯಥಾವತ್ತಾಗಿ ಮುಂದುವರೆಸಲಾಗಿದೆ.

7. ಈ ಸೀಟುಗಳಿಗೆ ಅಖಿಲ ಭಾರತ ವಿದ್ಯಾರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿ, ಅರ್ಹತೆಯ ಆಧಾರದ ಮೇಲೆ ಆಯ್ಕೆ ಮಾಡಲು ಸೂಚಿಸಲಾಗಿದೆ.

8. ಮೇಲಿನ ಕೋರ್ಸುಗಳಲ್ಲಿ ಉಳಿದ ಶೇಕಡಾ 50% ರಷ್ಟು ಸೀಟುಗಳು ಹಾಗೂ ಸ್ನಾತಕೋತ್ತರ ಇತರೆ ಎಲ್ಲಾ ಕೋರ್ಸಿನ ಸೀಟುಗಳನ್ನು ಕರ್ನಾಟಕದಲ್ಲಿ ಜನಿಸಿ ಮತ್ತು ಕರ್ನಾಟಕದಲ್ಲಿರುವ ಯಾವುದೇ ವಿಶ್ವವಿದ್ಯಾಲಯದಲ್ಲಿ ಪದವಿ ವ್ಯಾಸಂಗ ಮಾಡಿರುವ ವಿದ್ಯಾರ್ಥಿಗಳಿಗೆ ಮೀಸಲಿಡಲು ತೀರ್ಮಾನಿಸಲಾಯಿತು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಹಾಲಕ್ಷ್ಮಮ್ಮ**

ಪಿ.ಆರ್. 1359

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾರತೀಯ ವೈದ್ಯ ಪದ್ಧತಿ)

**ವಿಷಯ:** ಆಯುಷ್ ಪದ್ಧತಿಗಳನ್ನು ಮುಖ್ಯವಾಹಿನಿಗೆ ತರುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಆಯುಷ್, ಬೆಂಗಳರು, ಇವರ ಏಕ ಕಡತಗಳು.

1. ಕಡತ ಸಂಖ್ಯೆ: ಆಯುಷ್/20/ಐಇಸಿ(3) 2009–10
2. ಕಡತ ಸಂಖ್ಯೆ: ಆಯುಷ್/12/ಐಇಸಿ(3) 2009–10

**ಪ್ರಸ್ತಾವನೆ:**

ಉಲ್ಲೇಖಿತ ಪ್ರಸ್ತಾವನೆಯಲ್ಲಿ ನಿರ್ದೇಶಕರು, ಆಯುಷ್ ನಿರ್ದೇಶನಾಲಯ ಇವರು ಸರ್ಕಾರದ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ದಿನಾಂಕ: 30.03.2009 ರಂದು ನಡೆದ NRHM (ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನ) ಪಿ.ಐ.ಪಿ. 2009–10ರ ಮತ್ತು ಆಡಳಿತ/ಅಭಿವೃದ್ಧಿ ಪರಾಮರ್ಶೆ ಸಭೆಯ ನಡವಳಿಯನ್ನು ಉಲ್ಲೇಖಿಸಿ, ಜಿಲ್ಲಾ ಆಯುಷ್ ಅಧಿಕಾರಿಗಳನ್ನು ಜಿಲ್ಲೆಗೆ ಸಂಬಂಧಿಸಿದಂತೆ ಆಯುಷ್ ಇಲಾಖೆಯ ಕಾರ್ಯಕ್ರಮ ಅಧಿಕಾರಿಗಳಾಗಿ ಕರ್ತವ್ಯ ನಿರ್ವಹಿಸಲು ಹಾಗೂ ಅವರುಗಳು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಅಧೀನದಲ್ಲಿ ಕಾರ್ಯನಿರ್ವಹಿಸುವ ಬಗ್ಗೆ ಸೂಕ್ತ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ. ಅಲ್ಲದೆ, ಜಿಲ್ಲಾ ಆಯುಷ್ ಅಧಿಕಾರಿಗಳ ರಜಾ ಮಂಜೂರಾತಿ ಅಧಿಕಾರವನ್ನು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳಿಗೆ ನೀಡುವಂತೆ ಕೋರಿರುತ್ತಾರೆ. ಹಾಗೂ ಸಮರ್ಪಕವಾಗಿ ಕೆಲಸ ನಿರ್ವಹಿಸದಿರುವ ಆಯುಷ್ ಚಿಕಿತ್ಸಾಲಯಗಳು/ಆಸ್ಪತ್ರೆಗಳನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಸಂಸ್ಥೆಗಳೊಂದಿಗೆ ಕೋಲೋಕೇಟ್ (Co-locate) ಮಾಡುವುದು ಮುಖ್ಯವಾಹಿನಿಯ ಒಂದು ಮುಖ್ಯ ಅಂಶವಾಗಿದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನದಡಿಯಲ್ಲಿ ಆಯುಷ್ ಪದ್ಧತಿಗಳನ್ನು ಮುಖ್ಯವಾಹಿನಿಗೆ ತರುವ ಕಾರ್ಯಕ್ರಮವನ್ನು ಆದ್ಯತೆ ಮೇರೆಗೆ ಹಮ್ಮಿಕೊಂಡಿದ್ದು, ಜಿಲ್ಲಾ ಆಯುಷ್ ಅಧಿಕಾರಿಗಳು ಪ್ರತ್ಯೇಕವಾಗಿ ಕರ್ತವ್ಯ ನಿರ್ವಹಿಸದೆ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳೊಂದಿಗೆ ಸಮನ್ವಯಿಸಿ ಅವರ ಅಧೀನದಲ್ಲಿ ಕರ್ತವ್ಯ ನಿರ್ವಹಿಸುವುದು ಸಮರ್ಪಕವಾಗಿದೆಯೆಂದು ಭಾವಿಸಲಾಗಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಆಕುಕ 199 ಪಿಐಎಂ 2009, ಬೆಂಗಳೂರು, ದಿನಾಂಕ: 23ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಆಯುಷ್ ಇಲಾಖೆಯ ಎಲ್ಲಾ ಜಿಲ್ಲಾ ಆಯುಷ್ ಅಧಿಕಾರಿಗಳು ಆಯಾ ಜಿಲ್ಲೆಗೆ ಸಂಬಂಧಿಸಿದಂತೆ, ಆಯುಷ್ ಇಲಾಖಾ ಕಾರ್ಯಕ್ರಮ ಅಧಿಕಾರಿಗಳಾಗಿ ಮತ್ತು ಅವರುಗಳು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳೊಂದಿಗೆ ಸಮನ್ವಯಿಸಿ ಅವರ ಅಧೀನದಲ್ಲಿ ಕರ್ತವ್ಯ ನಿರ್ವಹಿಸುವುದು.

ಆಯುಷ್ ಕಾರ್ಯಕ್ರಮಗಳಿಗೆ ಸಂಬಂಧಿಸಿದಂತೆ, ಎಲ್ಲಾ ಪತ್ರ ವ್ಯವಹಾರಗಳನ್ನು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಮುಖಾಂತರ ಮತ್ತು ಅವರ ಶಿಫಾರಸ್ಸಿನೊಂದಿಗೆ ಸಲ್ಲಿಸುವುದು.

ಜಿಲ್ಲಾ ಆಯುಷ್ ಅಧಿಕಾರಿಗಳ ರಜಾ ಮಂಜೂರಾತಿ ಮಾಡಲು ಮತ್ತು ಜಿಲ್ಲಾ ಆಯುಷ್ ಅಧಿಕಾರಿಗಳ ಅನುಪಸ್ಥಿತಿಯಲ್ಲಿ ಸೂಕ್ತ ಬದಲಿ ವ್ಯವಸ್ಥೆಯನ್ನು ಮಾಡಲು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳಿಗೆ ಅಧಿಕಾರವನ್ನು ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಹಾಲಕ್ಷ್ಮಮ್ಮ**

ಪಿ.ಆರ್. 1365

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾರತೀಯ ವೈದ್ಯ ಪದ್ಧತಿ)

**ವಿಷಯ:** ಮೈಸೂರಿನ ಶ್ರೀ ಕೃಷ್ಣರಾಜೇಂದ್ರ ಆಸ್ಪತ್ರೆಯಲ್ಲಿ ಶ್ರೀ ಜಯದೇವ ಕಾರ್ಡಿಯಾಲಜಿ ಸಂಸ್ಥೆಯ ಹಾಗೂ ಕಿದ್ವಾಯಿ ಕ್ಯಾನ್ಸರ್ ಸಂಸ್ಥೆಯ ಶಾಖೆಗಳನ್ನು ತೆರೆಯುವ ಬಗ್ಗೆ.

**ಓದಲಾಗಿದೆ:**
1) 2009–10ನೇ ಸಾಲಿನ ಮಾನ್ಯ ಮುಖ್ಯ ಮಂತ್ರಿಗಳ ಆಯವ್ಯಯದ ಭಾಷಣ
2) ನಿರ್ದೇಶಕರು, ಶ್ರೀ ಜಯದೇವ ಕಾರ್ಡಿಯಾಲಜಿ ಸಂಸ್ಥೆಯ ಪತ್ರ ಸಂಖ್ಯೆ: ಎಸ್‌ಜೆಐಸಿ:ಸಿಬ್ಬಂದಿ(1):286: 2008–09 ದಿನಾಂಕ: 04.03.2009
3) ನಿರ್ದೇಶಕರು, ಕಿದ್ವಾಯಿ ಸ್ಮಾರಕ ಗಂಥಿ ಸಂಸ್ಥೆ, ಇವರ ಪತ್ರ ಸಂಖ್ಯೆ:ಪಿಇಆರ್/ಸಿಎಬಿ–(ii)/ಡಿ–2–138/2009 ದಿನಾಂಕ: 19.02.2009

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ. ಸಂ. (1) ರಲ್ಲಿ ಮಾನ್ಯ ಮುಖ್ಯಮಂತ್ರಿಗಳು 2009–10ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಮೈಸೂರಿನ ಶ್ರೀ ಕೃಷ್ಣರಾಜೇಂದ್ರ ಆಸ್ಪತ್ರೆಯಲ್ಲಿ ಶ್ರೀ ಜಯದೇವ ಕಾರ್ಡಿಯಾಲಜಿ ಸಂಸ್ಥೆಯ ಹಾಗೂ ಕಿದ್ವಾಯಿ ಕ್ಯಾನ್ಸರ್ ಸಂಸ್ಥೆಯ ಶಾಖೆಗಳನ್ನು ತೆರೆಯಲು ರೂ. 10.00 ಕೋಟಿಗಳನ್ನು ಈ ಉದ್ದೇಶಕ್ಕಾಗಿ ಒದಗಿಸಲಾಗುವುದೆಂದು ಘೋಷಿಸಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ. (2) ಮತ್ತು (3) ರಲ್ಲಿ ನಿರ್ದೇಶಕರು, ಕಿದ್ವಾಯಿ ಸ್ಮಾರಕ ಗಂಥಿ ಸಂಸ್ಥೆ ಹಾಗೂ ಶ್ರೀ ಜಯದೇವ ಕಾರ್ಡಿಯಾಲಜಿ ಸಂಸ್ಥೆ ಇವರು ಮೈಸೂರಿನ ಶ್ರೀ ಕೃಷ್ಣರಾಜೇಂದ್ರ ಆಸ್ಪತ್ರೆಯಲ್ಲಿ ಸದರಿ ಆಸ್ಪತ್ರೆಗಳ ಶಾಖೆಗಳನ್ನು ತೆರೆಯಲು ರೂ. 10.00 ಕೋಟಿ ಅನುದಾನವನ್ನು ಒದಗಿಸಬೇಕೆಂದು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಕಿದ್ವಾಯಿ ಸ್ಮಾರಕ ಗಂಥಿ ಸಂಸ್ಥೆಯ ಶಾಖೆಯನ್ನು ಮೈಸೂರಿನ ಶ್ರೀ ಕೃಷ್ಣರಾಜೇಂದ್ರ ಆಸ್ಪತ್ರೆಯಲ್ಲಿ ತೆರೆಯಲು ಪ್ರಸಕ್ತ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 2210–05–105–1–06–101 – ಯೋಜನೆ ಅಡಿ ರೂ. 270.00 ಲಕ್ಷದಷ್ಟು ಹೆಚ್ಚುವರಿ ಅನುದಾನವನ್ನು ಹಾಗೂ ಶ್ರೀ ಜಯದೇವ ಕಾರ್ಡಿಯಾಲಜಿ ಚಿಕಿತ್ಸಾ ಕೇಂದ್ರ ತೆರೆಯಲು ಪ್ರಸಕ್ತ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 2210–05–105–1–12–101 – ಯೋಜನೆ ಅಡಿಯಲ್ಲಿ 1150–00 ಲಕ್ಷಗಳನ್ನು ಒದಗಿಸಿದೆ. ಇದು ಸದರಿ ಸಂಸ್ಥೆಗೆ ನೀಡುವ ವಾಡಿಕೆ ಅನುದಾನಕ್ಕಿಂತ 200–00 ಲಕ್ಷ ಹೆಚ್ಚಿಗೆ ಇರುತ್ತದೆ. ಆದಕಾರಣ ಹೆಚ್ಚುವರಿ ಅನುದಾನ ಕೋರುವ ಮುನ್ನ ಈ ಅನುದಾನವನ್ನು ಸಮರ್ಪಕವಾಗಿ ಉಪಯೋಗಿಸಿಕೊಳ್ಳಲು ತೀರ್ಮಾನಿಸಿ ಸದರಿ ಶಾಖೆಗಳನ್ನು ಮೈಸೂರಿನ ಶ್ರೀ ಕೃಷ್ಣರಾಜೇಂದ್ರ ಆಸ್ಪತ್ರೆಯಲ್ಲಿ ತೆರೆಯಲು ಆಡಳಿತಾತ್ಮಕ ಅನುಮೋದನೆಯನ್ನು ನೀಡಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಆಕುಕ 108 ಪಿಟಿಡಿ 2009, ಬೆಂಗಳೂರು, ದಿನಾಂಕ: 27ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಜಯದೇವ ಹೃದ್ರೋಗ ಸಂಸ್ಥೆಯ ಶಾಖೆಯನ್ನು ಮತ್ತು ಕಿದ್ವಾಯಿ ಸ್ಮಾರಕ ಗ್ರಂಥಿಯ ಶಾಖೆಯನ್ನು ಮೈಸೂರಿನ ಶ್ರೀ ಕೃಷ್ಣರಾಜೇಂದ್ರ ಆಸ್ಪತ್ರೆಯಲ್ಲಿ ತೆರೆಯಲು ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ ಹಾಗೂ ಈ ಶಾಖೆಗಳನ್ನು ತೆರೆಯಲು ಬೇಕಾಗುವ ಅನುದಾನವನ್ನು ಶ್ರೀ ಜಯದೇವ ಹೃದ್ರೋಗ ಸಂಸ್ಥೆಯ 2009–10ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ 2210–05–105–1–12–101–ಯೋಜನೆ ಅಡಿಯಲ್ಲಿ ಒದಗಿಸಿರುವ ಅನುದಾನದಡಿ ಹಾಗೂ ಕಿದ್ವಾಯಿ ಸ್ಮಾರಕ ಗಂಥಿ ಸಂಸ್ಥೆಯ ಲೆಕ್ಕಶೀರ್ಷಿಕೆ 2210–05–105–1–06–101–ಯೋಜನೆ ಅಡಿಯಲ್ಲಿ ಒದಗಿಸಿರುವ ಅನುದಾನದಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ:605: ವೆಚ್ಚ: 5–2009 ದಿನಾಂಕ: 6.5.2009 ಹಾಗೂ ಆಇ:658: ವೆಚ್ಚ–5–2009 ದಿನಾಂಕ : 26.05.2009ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಮಹಾಲಕ್ಷ್ಮಮ್ಮ**

ಪಿ.ಆರ್. 1412 ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾರತೀಯ ವೈದ್ಯ ಪದ್ಧತಿ)

**ವಿಷಯ:** 2009–10ನೇ ಸಾಲಿನ ಲೆಕ್ಕಶೀರ್ಷಿಕೆ – 2210 (ಯೋಜನೇತರ) ಅಡಿಯಲ್ಲಿ ಹೆಚ್ಚುವರಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಆಕುಕ 188 ಪಿಟಿಡಿ 2009, ದಿನಾಂಕ: 29.05.2009.

2. ಸರ್ಕಾರದ ಆದೇಶ ಸಂಖ್ಯೆ: ಆಇ 6 ಬಿಆರ್ಎಸ್ 2009, ದಿನಾಂಕ: 30.05.2009.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರದ ಅದೇಶದಲ್ಲಿ 2009–10ನೇ ಸಾಲಿನಲ್ಲಿ ಹೃದಯ ಸಂಜೀವಿನಿ ಯೋಜನೆ ಅಡಿಯಲ್ಲಿ 2000 ಬಡ ಹೃದ್ರೋಗಿಗಳಿಗೆ (BPL) ಉಚಿತವಾಗಿ ಶ್ರೀ ಜಯದೇವ ಹೃದ್ರೋಗ ಚಿಕಿತ್ಸಾ ಸಂಸ್ಥೆ, ಬೆಂಗಳೂರು, ಇಲ್ಲಿ ಹೃದಯ ಚಿಕಿತ್ಸೆ ನೀಡಲು ಸರ್ಕಾರವು ಲೆಕ್ಕ ಶೀರ್ಷಿಕೆ 2210 ರ ಅಡಿ ರೂ. 4.00 ಕೋಟಿ ಗಳನ್ನು ಈ ಆರ್ಥಿಕ ವರ್ಷದಲ್ಲಿ ಹೆಚ್ಚುವರಿಯಾಗಿ ಬಿಡುಗಡೆ ಮಾಡಲು ಅನುಮತಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿನ ಸರ್ಕಾರದ ಆದೇಶದಲ್ಲಿ ಹೃದಯ ಸಂಜೀವಿನಿ ಯೋಜನೆ ಅಡಿಯಲ್ಲಿ 2000 ಬಡ ಹೃದ್ರೋಗಿಗಳಿಗೆ (BPL) ಉಚಿತವಾಗಿ ಶ್ರೀ ಜಯದೇವ ಹೃದ್ರೋಗ ಚಿಕಿತ್ಸಾ ಸಂಸ್ಥೆ, ಬೆಂಗಳೂರು, ಇಲ್ಲಿ ಹೃದಯ ಚಿಕಿತ್ಸೆ ನೀಡಲು ಲೆಕ್ಕ ಶೀರ್ಷಿಕೆ 2210–05–105–1–12–101 (ಯೋಜನೇತರ) ಅಡಿಯಲ್ಲಿ ರೂ. 400.00 ಲಕ್ಷಗಳನ್ನು ಹೆಚ್ಚುವರಿ ಅನುದಾನವನ್ನು ಮಂಜೂರು ಮಾಡಿ ಇದೇ ಆರ್ಥಿಕ ವರ್ಷದಲ್ಲಿನ ಗ್ರಾಂಟ್ ನಂ. 22 ರಡಿಯಲ್ಲಿನ ಪೂರಕ ಅಂದಾಜಿನಲ್ಲಿ ಸಕ್ರಮಗೊಳಿಸಲಾಗುವುದೆಂದು ಆದೇಶಿಸಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 188 ಪಿಟಿಡಿ 2009, ಬೆಂಗಳೂರು, ದಿನಾಂಕ: 2ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹೃದಯ ಸಂಜೀವಿನಿ ಯೋಜನೆ ಅಡಿಯಲ್ಲಿ 2000 ಬಡ ಹೃದ್ರೋಗಿಗಳಿಗೆ (BPL) ಉಚಿತವಾಗಿ ಶ್ರೀ ಜಯದೇವ ಹೃದ್ರೋಗ ಚಿಕಿತ್ಸಾ ಸಂಸ್ಥೆ, ಬೆಂಗಳೂರು, ಇಲ್ಲಿ ಹೃದಯ ಚಿಕಿತ್ಸೆ ನೀಡಲು ಲೆಕ್ಕ ಶೀರ್ಷಿಕೆ 2210–05–105–1–12–101 (ಯೋಜನೇತರ) ಅಡಿಯಲ್ಲಿ ರೂ. 400.00 ಲಕ್ಷಗಳನ್ನು (ನಾಲ್ಕು ನೂರು ಲಕ್ಷಗಳು ಮಾತ್ರ) ಹೆಚ್ಚುವರಿ ಅನುದಾನವಾಗಿ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

ಸದರಿ ಹೆಚ್ಚುವರಿ ಅನುದಾನವನ್ನು ಪ್ರಸ್ತುತ ಆರ್ಥಿಕ ವರ್ಷದ ಪೂರಕ ಅಂದಾಜಿನಲ್ಲಿ (ಅನುದಾನ ಸಂಖ್ಯೆ–22) ಸಕ್ರಮಗೊಳಿಸಲು ಸೂಕ್ತ ಕ್ರಮ ಕೈಗೊಳ್ಳುವುದು.

ತತ್ಸಂಬಂಧಿತ ಸಹಾಯಾನುದಾನದ ಬಿಲ್ಲುಗಳಿಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಸರ್ಕಾರದ ಅಪರ ಕಾರ್ಯದರ್ಶಿ (ವೈದ್ಯಕೀಯ ಶಿಕ್ಷಣ) ಯವರು ಮೇಲು ರುಜು ಮಾಡಲು ಅಧಿಕೃತಗೊಳಿಸಲಾಗಿದೆ. ಸದರಿ ಬಿಲ್ಲಿನ ನಗದೀಕರಣಕ್ಕಾಗಿ ಸಂಬಂಧಿಸಿದ ಬೆಂಗಳೂರಿನ ರಾಜ್ಯ ಹುಜೂರ್ ಖಜಾನೆಗೆ ಮೇಲೆ ರುಜುವಿನೊಂದಿಗೆ ಪಡೆಯತಕ್ಕದ್ದು.

1958ರ ಕರ್ನಾಟಕ ಆರ್ಥಿಕ ಸಂಹಿತೆಯ 161 ಅನುಚ್ಛೇದದಡಿ ಯಾವ ಉದ್ದೇಶಕ್ಕಾಗಿ ಮೇಲ್ಕಂಡ ಸಹಾಯಾನುದಾನವನ್ನು ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಉಪಯೋಗಿಸಿ ಅದರಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ಬಳಕೆ ಪ್ರಮಾಣ ಪತ್ರವನ್ನು ಸರ್ಕಾರಕ್ಕೆ, ಮಹಾಲೇಖಪಾಲರಿಗೆ ಮತ್ತು ವೈದ್ಯಕೀಯ ಶಿಕ್ಷಣ ನಿರ್ದೇಶಕರಿಗೆ ತ್ವರಿತವಾಗಿ ಸಲ್ಲಿಸತಕ್ಕದ್ದು 342 (11)ನೇ (x) ಅನುಚ್ಛೇದದಡಿ ರೀ ಕನ್ಸಲೇಷನ್ ಪ್ರಮಾಣ ಪತ್ರವನ್ನು ಮಹಾಲೇಖಪಾಲರ ಕಛೇರಿಯಿಂದ ಪಡೆದು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಹಾಲಕ್ಷ್ಮಮ್ಮ**

ಪಿ.ಆರ್. 1461 ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಒಳಾಡಳಿತ ಸಚಿವಾಲಯ

### ಅಧಿಸೂಚನೆ

**ಸಂ. ಒಇ153 ಪೊಪೆಸೆ 2009, ಬೆಂಗಳೂರು, ದಿನಾಂಕ: 29ನೇ ಜುಲೈ 2009**

ಸರ್ಕಾರಿ ಅಧಿಸೂಚನೆ ಸಂಖ್ಯೆ: ಲೋಇ 174 ಸೇಎಸು 2009, ದಿನಾಂಕ: 13.07.2009ರಲ್ಲಿ ಲೋಕೋಪಯೋಗಿ ಇಲಾಖೆಯ ಶ್ರೀ ಎಂ.ಜಿ ಕೃಷ್ಣಮೂರ್ತಿ, ಕಾರ್ಯಪಾಲಕ ಇಂಜಿನಿಯರ್, ಇವರನ್ನು ಒಳಾಡಳಿತ ಇಲಾಖೆಯ ವಶಕ್ಕೆ ನೀಡಿದ್ದು, ಸದರಿ ಕಾರ್ಯಪಾಲಕ ಇಂಜಿನಿಯರ್ ಅವರನ್ನು ಕರ್ನಾಟಕ ರಾಜ್ಯ ಪೊಲೀಸ್ ಗೃಹ ನಿರ್ಮಾಣ ನಿಯಮಿತಕ್ಕೆ ಮರು ಸ್ಥಳನಿಯುಕ್ತಿಗೊಳಿಸಿ ನೇಮಕ ಮಾಡಲಾಗಿದೆ. ಈ ನಿಯೋಜನೆಗೆ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 19 ಎಸ್‌ಆರ್‌ಎಸ್ 1988, ದಿನಾಂಕ: 25.05.1988ರ ಪ್ರಕಾರ ಷರತ್ತು ಮತ್ತು ನಿಬಂಧನೆಗಳನ್ನು ನಿಗದಿಪಡಿಸಿ ಪ್ರತ್ಯೇಕವಾಗಿ ಆದೇಶವನ್ನು ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಅದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1874 **ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೋಲೀಸ್ ಸೇವೆಗಳು)

## ಕಂದಾಯ ಸಚಿವಾಲಯ

**ವಿಷಯ:** ರಾಜ್ಯದ ವಿವಿಧ ತಾಲ್ಲೂಕು ಕಛೇರಿಗಳಲ್ಲಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಅಡಿ ಕಾರ್ಯನಿರ್ವಹಿಸಲು ಮಂಜೂರಾಗಿದ್ದ ಪ್ರಥಮ ದರ್ಜೆ ಸಹಾಯಕರ ಹುದ್ದೆಗಳು ಮತ್ತು ರೆವಿನ್ಯೂ ಆಡಿಟರ್ಸ್ ಹುದ್ದೆಗಳನ್ನು ದಿನಾಂಕ: 01.04.2009 ರಿಂದ 31.03.2010ರ ವರೆಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ. ಕಂಇ 17 ಎಲ್‌ಆರ್‌ಇ 88 (ಭಾಗ–2) ದಿ: 14.05.1993.
2. ಸರ್ಕಾರದ ಆದೇಶ ಸಂ: ಕಂಇ 68 ಎಲ್‌ಆರ್‌ಎ 2001, ದಿ: 22.10.2001.
3. ಸರ್ಕಾರದ ಆದೇಶ ಸಂ: ಕಂಇ 85 ಎಲ್‌ಆರ್‌ಎ 2002, ದಿ: 07.09.2002.
4. ಸರ್ಕಾರದ ಆದೇಶ ಸಂ: ಕಂಇ 50 ಎಲ್‌ಆರ್‌ಎ 2003, ದಿ: 16.12.2003.
5. ಸರ್ಕಾರದ ಆದೇಶ ಸಂ: ಕಂಇ 131 ಎಲ್‌ಆರ್‌ಎ 2004, ದಿ: 15.01.2005.
6. ಸರ್ಕಾರದ ಆದೇಶ ಸಂ: ಕಂಇ 79 ಎಲ್‌ಆರ್‌ಎ 2005, ದಿ: 01.07.2005.
7. ಸರ್ಕಾರದ ಆದೇಶ ಸಂ: ಕಂಇ 15 ಎಲ್‌ಆರ್‌ಎ 2006, ದಿ: 19.10.2006.
8. ಸರ್ಕಾರದ ಆದೇಶ ಸಂ: ಕಂಇ 13 ಎಲ್‌ಆರ್‌ಎಂ 2007, ದಿ: 24.11.2007.
9. ಸರ್ಕಾರದ ಆದೇಶ ಸಂ: ಕಂಇ 36 ಎಲ್‌ಆರ್‌ಎಂ 2008, ದಿ: 05.08.2008.

**ಪ್ರಸ್ತಾವನೆ:**

ಮೇಲಿನ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ ವಿವಿಧ ತಾಲ್ಲೂಕು ಕಛೇರಿಗಳಲ್ಲಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಅಡಿ ಕಾರ್ಯನಿರ್ವಹಿಸಲು ತಾತ್ಕಾಲಿಕ ಪ್ರಥಮ ದರ್ಜೆ ಸಹಾಯಕರ ಹುದ್ದೆಗಳು ಮತ್ತು ರೆವಿನ್ಯೂ ಆಡಿಟರ್ಸ್ ಹುದ್ದೆಗಳನ್ನು ಸೃಜಿಸಲಾಗಿದ್ದು, ಈ ಹುದ್ದೆಗಳನ್ನು ಕಾಲಕಾಲಕ್ಕೆ ಮುಂದುವರೆಸಲಾಗುತ್ತಿದೆ. ಅಂತಿಮಾಗಿ ಕಳೆದ ಸಾಲಿನಲ್ಲಿ ಕ್ರಮ ಸಂಖ್ಯೆ (9) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಈ ಹುದ್ದೆಗಳನ್ನು (147 ಹುದ್ದೆಗಳು) ದಿನಾಂಕ: 01.04.2008 ರಿಂದ 31.03.2009ರ ವರೆಗೆ ಒಂದು ವರ್ಷದ ಕಾಲಾವಧಿಗೆ ಮುಂದುವರೆಸಲಾಗಿದೆ.

ಪ್ರಸ್ತುತ 2009–10ನೇ ಸಾಲಿನಲ್ಲಿ ಭೂ ಸುಧಾರಣೆಯಲ್ಲಿ ಕಾರ್ಯನಿರ್ವಹಿಸುತ್ತಿರುವ 142 ಪ್ರಥಮ ದರ್ಜೆ ಸಹಾಯಕರ ಹುದ್ದೆಗಳು ಹಾಗೂ ರೆವಿನ್ಯೂ ಆಡಿಟರ್ಸ್ 05 ಹುದ್ದೆಗಳನ್ನು ಮುಂದುವರೆಸಲು ಆಯವ್ಯಯದ ಅಪೆಂಡಿಕ್ಸ್ "ಬಿ" ನಲ್ಲಿ ಅವಕಾಶ ಕಲ್ಪಿಸಲಾಗಿದೆ. ರಾಜ್ಯದ ಕೆಲವು ಜಿಲ್ಲಾಧಿಕಾರಿಗಳು ವಿವಿಧ ತಾಲ್ಲೂಕು ಕಛೇರಿಗಳಲ್ಲಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಅಡಿ ಕಾರ್ಯನಿರ್ವಹಿಸುತ್ತಿರುವ ತಾತ್ಕಾಲಿಕ ಪ್ರಥಮ ದರ್ಜೆ ಸಹಾಯಕ ಹುದ್ದೆಗಳು ಹಾಗೂ ರೆವಿನ್ಯೂ ಆಡಿಟರ್ಸ್ ಹುದ್ದೆಗಳು ಅಗತ್ಯವಾಗಿರುವುದರಿಂದ ಮತ್ತೊಂದು ವರ್ಷ ಮುಂದುವರೆಸುವಂತೆ ಕೋರಿದ್ದು, ಪ್ರಾದೇಶಿಕ ಆಯುಕ್ತರ/ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಪ್ರಥಮ ದರ್ಜೆ ಸಹಾಯಕ ಹುದ್ದೆಗಳು ಹಾಗೂ ರೆವಿನ್ಯೂ ಆಡಿಟರ್ಸ್ ಹುದ್ದೆಗಳನ್ನು ಒಂದು ವರ್ಷದ ಅವಧಿಗೆ ಮುಂದುವರೆಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿರುತ್ತದೆ.

**ಸರ್ಕಾರದ ಆದೇಶ ಸಂ: ಕಂಇ 08 ಎಲ್‌ಆರ್‌ಎಸ್ 2009, ಬೆಂಗಳೂರು, ದಿನಾಂಕ: 18ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಜ್ಯದ ವಿವಿಧ ತಾಲ್ಲೂಕು ಕಛೇರಿಗಳಲ್ಲಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಅಡಿ ಕಾರ್ಯನಿರ್ವಹಿಸಲು ಸೃಜಿಸಲಾಗಿದ್ದ ತಾತ್ಕಾಲಿಕ ಪ್ರಥಮ ದರ್ಜೆ ಸಹಾಯಕರ ಹುದ್ದೆಗಳ ಪೈಕಿ 142 ಹುದ್ದೆಗಳನ್ನು ಹಾಗೂ ರೆವಿನ್ಯೂ ಆಡಿಟರ್ಸ್ 05 ಹುದ್ದೆಗಳನ್ನು ಒಟ್ಟು 147 ಹುದ್ದೆಗಳನ್ನು (2009–10ನೇ ಸಾಲಿನ ಆಯವ್ಯಯದ ಅಪೆಂಡಿಕ್ಸ್ "ಬಿ" ನಲ್ಲಿ ವಿವರಿಸಿರುವಂತೆ ಬೆಂಗಳೂರು ವಿಭಾಗದ ಜಿಲ್ಲೆಗಳಿಗೆ 50 ಹುದ್ದೆಗಳು, ಮೈಸೂರು ವಿಭಾಗದ ಜಿಲ್ಲೆಗಳಿಗೆ 43 ಹುದ್ದೆಗಳು, ಹಾಗೂ ಬೆಳಗಾವಿ ವಿಭಾಗದ ಜಿಲ್ಲೆಗಳಿಗೆ 49 ಹುದ್ದೆಗಳು ಹಾಗೂ ಗುಲ್ಬರ್ಗಾ ವಿಭಾಗಕ್ಕೆ 05 ರೆವಿನ್ಯೂ ಆಡಿಟರ್ಸ್ ಹುದ್ದೆಗಳು, ಹೀಗೆ ಒಟ್ಟು 147 ಹುದ್ದೆಗಳು) ಒಂದು ವರ್ಷದ ಅವಧಿಗೆ ಅಂದರೆ, ದಿನಾಂಕ 01.04.2009 ರಿಂದ 31.03.2010ರ ವರೆಗೆ ಮುಂದುವರೆಸಿ ಆದೇಶಿಸಲಾಗಿದೆ.

ಸದರಿ ಬಾಬ್ತಿಗೆ ತಗಲುವ ವೆಚ್ಚವನ್ನು 2009–10ನೇ ಸಾಲಿನ ಲೆಕ್ಕ ಶೀರ್ಷಿಕೆ "2506–ಲ್ಯಾಂಡ್ ರಿಫಾರ್ಮ್ಸ್ – ರೆಗ್ಯುಲೇಷನ್ ಆಫ್ ಲ್ಯಾಂಡ್ ಹೋಲ್ಡಿಂಗ್ ಅಂಡ್ ಟೆನನ್ಸಿ" (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಈ ಹುದ್ದೆಗಳ ಮುಂದುವರಿಕೆಗೆ ಸಂಬಂಧಿಸಿದಂತೆ ಸರ್ಕಾರದ ಆದೇಶ ಸಂ. ಕಂಇ 17 ಎಲ್‌ಆರ್‌ಇ 88 (ಭಾಗ–2) ದಿನಾಂಕ: 14.05.93 ರಲ್ಲಿ ವಿಧಿಸಿರುವ ಷರತ್ತುಗಳು ಅನ್ವಯವಾಗುತ್ತವೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 96 ದಿನಾಂಕ: 10.07.1996 ಹಾಗೂ ಸಂಖ್ಯೆ ಎಫ್‌ಡಿ 01 ಟಿಎಫ್‌ಪಿ 2003 ದಿನಾಂಕ: 12.06.2003 ರಲ್ಲಿ ಆಡಳಿತ ಇಲಾಖೆಯ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1886 **ಟಿ.ಎನ್. ನಾರಾಯಣ ಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂ ಸುಧಾರಣೆ)

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಶಿವಮೊಗ್ಗ ತಾಲ್ಲೂಕು, ಮಲ್ಲಿಗೇನಹಳ್ಳಿ ಗ್ರಾಮದ ಸ.ನಂ. 31/1,2, 33, 34, 35/2, 35/15, 36, 37, 38, 39/1,2, 40; 40/1,2; 42/1ಎ ರಿಂದ 42/3 ಹೆಚ್ 3ರವರೆಗೆ; 42/2 ರಿಂದ 42/11ರವರೆಗೆ; 43, 44; 45; 46/1,2; 47/1,2; 48; 49; 50; 51; 53; 54; 55/1,2; 56; 57; 58/1; 59; 60; 61; 62; 63; ಮತ್ತು 64 ರಲ್ಲಿನ ಒಟ್ಟು ವಿಸ್ತೀರ್ಣ 172 ಎಕರೆ 24 ಗುಂಟೆ (69.70 ಹೆಕ್ಟೇರ್) ಪ್ರದೇಶಕ್ಕೆ ವಸತಿ ಯೋಜನೆ ಅಭಿವೃದ್ಧಿಪಡಿಸಿ, ಅನುಷ್ಠಾನಗೊಳಿಸಲು ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1967ರ ಸೆಕ್ಷನ್ 18 (3) ರ ಅಡಿಯಲ್ಲಿ ಆಡಳಿತಾತ್ಮಕ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂ. ನಅಇ 106, ಬೆಂರೂಪ್ರಾ 2003, ದಿ: 20.03.2004

2. ಸರ್ಕಾರದ ಆದೇಶ ಸಂ: ನಅಇ 26 ಬೆಂರೂಪ್ರಾ 2009, ದಿ: 5.2.2009

3. ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರದ ಪತ್ರ ಸಂಖ್ಯೆ:ಶಿನಪ್ರಾ/ನಯೋ/ಮಲ್ಲಿಗೇನಹಳ್ಳಿ/ವಯೋ/ಒಆ/2009–10/198 ದಿನಾಂಕ: 26.05.2009 ಮತ್ತು 15.06.2009.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರದ ಪತ್ರ ದಿನಾಂಕ 20.03.2004 ರಲ್ಲಿ ಶಿವಮೊಗ್ಗ ತಾಲ್ಲೂಕು, ಮಲ್ಲಿಗೇನಹಳ್ಳಿ, ಗ್ರಾಮದಲ್ಲಿನ ಸ. ನಂ. 31/1,2, 33,34,35/2, 35/15; 36; 37; 38;39/1,2; 40; 40/1,2; 42/1ಎ ರಿಂದ 42/3 ಹೆಚ್ 3 ರವರೆಗೆ; 42/2 ರಿಂದ 42/11ರವರೆಗೆ 43; 44; 45; 46/1,2; 47/1,2; 48; 49; 50; 51; 53; 54; 55/1,2; 56; 57; 58/1; 59; 60; 61; 62; 63 ಮತ್ತು 64ರಲ್ಲಿನ ಒಟ್ಟು 178.04 ಎಕರೆ ಜಮೀನನ್ನು ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರವು ವಸತಿ ಯೋಜನೆಗಾಗಿ ಭೂ ಸ್ವಾಧೀನಪಡಿಸಿಕೊಳ್ಳಲು ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರ ಕಾಯ್ದೆ 1987 ಕಲಂ 15 (1) ಬಿ ರನ್ವಯ ಸರ್ಕಾರದ ಅನುಮೋದನೆ ನೀಡಲಾಗಿದೆ.

ತದನಂತರ ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಈ ಜಮೀನುಗಳ ಪೈಕಿ 131 ಎಕರೆ 31 ಗುಂಟೆ ಜಮೀನನ್ನು ಪ್ರಾಧಿಕಾರದ ಪರವಾಗಿ ನಗರ ಯೋಜನಾ ನಿರ್ದೇಶಕರ ಅಭಿಪ್ರಾಯದ ಮೇರೆಗೆ ವ್ಯವಸಾಯ ವಲಯದಿಂದ ವಸತಿ ವಲಯಕ್ಕೆ ಭೂ ಉಪಯೋಗ ಬದಲಾವಣೆ ಮಾಡಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಶಿವಮೊಗ್ಗ ನಗರವು ಅತೀ ವೇಗವಾಗಿ ಬೆಳೆಯುತ್ತಿರುವ ನಗರವಾಗಿದ್ದು, ವಸತಿ ನಿವೇಶನಗಳಿಗೆ ಸಾಕಷ್ಟು ಬೇಡಿಕ ಇರುವುದರಿಂದ, ಸಾರ್ವಜನಿಕರು ನಿವೇಶನಗಳನ್ನು ಹಂಚಿಕೆ ಮಾಡುವಂತೆ ಕೋರಿ ಮುಂಗಡ ಠೇವಣಿಯೊಂದಿಗೆ 15,295 ಅರ್ಜಿಗಳನ್ನು ಸಲ್ಲಿಸಿರುವುದರಿಂದ, ಹಾಗೂ ಶಿವಮೊಗ್ಗ ನಗರವನ್ನು ಯೋಜನಾಬದ್ಧವಾಗಿ ಅಭಿವೃದ್ಧಿಪಡಿಸ ಬೇಕಾಗಿರುವುದರಿಂದ, ಶಿವಮೊಗ್ಗ ತಾಲ್ಲೂಕು, ಮಲ್ಲಿಗೇನಹಳ್ಳಿ ಗ್ರಾಮದಲ್ಲಿನ ಸ. ನಂ. 31/1,2, 33; 34;35/2, 35/15 36; 37; 38; 39/1,2; 40; 40/1,2; 42/1ಎ ರಿಂದ 42/3 ಹೆಚ್ 3 ವರೆಗೆ; 42/2 ರಿಂದ 42/11ರವರೆಗೆ, 43; 44; 45; 46/1, 2; 47/1,2; 48; 49; 50; 51; 53; 54; 55/1,2; 56, 57, 58/1; 59; 60; 61; 62; 63; ಮತ್ತು 64ರಲ್ಲಿನ ಒಟ್ಟು 172 ಎಕರೆ 24 ಗುಂಟೆ ಪ್ರದೇಶದಲ್ಲಿ ವಸತಿ ಯೋಜನೆಯನ್ನು ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ

| | | |
|---|---|---|
| 1. | ಹಾಲಿ ಪ್ರಾಧಿಕಾರದಲ್ಲಿ ಲಭ್ಯವಿರುವ ಮೊತ್ತ | 7.00 ಕೋಟಿ |
| 2. | ವಿವಿಧ ಬಡಾವಣೆಗಳಲ್ಲಿನ 350 ಮೂಲೆ ನಿವೇಶನ ವಿಲೇವಾರಿಯಿಂದ ನಿರೀಕ್ಷಿಸಲಾದ ಮೊತ್ತ | 20.00 ಕೋಟಿ |
| 3. | ಪ್ರಾಧಿಕಾರದಲ್ಲಿನ 25 ಸಿ.ಎ. ನಿವೇಶನಗಳ ವಿಲೇವಾರಿಯಿಂದ ನಿರೀಕ್ಷಿಸಲಾದ ಮೊತ್ತ | 5.00 ಕೋಟಿ |
| 4. | ಕೆನರಾ ಬ್ಯಾಂಕ್ ಮತ್ತು ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ರವರಿಂದ ಸಾಲದ ರೂಪದಲ್ಲಿ | 33.00 ಕೋಟಿ |
| | **ಒಟ್ಟು ರೂ.** | **65–00 ಕೋಟಿ** |

ಕೈಗೆತ್ತಿಕೊಳ್ಳಲು ಮೇಲೆ ಓದಲಾದ ಕ್ರಮ ಸಂಖ್ಯೆ: (3) ರಲ್ಲಿ ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರದ ಆಯುಕ್ತರು, ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಆಡಳಿತಾತ್ಮಕ ಅನುಮೋದನೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 146 ಬೆಂರೂಪ್ರಾ 2009, ಬೆಂಗಳೂರು, ದಿನಾಂಕ: 31ನೇ ಜುಲೈ 2009**

ಶಿವಮೊಗ್ಗ ತಾಲ್ಲುಕು, ಮಲ್ಲಿಗೇನಹಳ್ಳಿ ಗ್ರಾಮದಲ್ಲಿನ ಸ.ನಂ. 31/1,2, 33,34,35/2, 35/15; 36; 37; 38; 39//1,2; 40; 40/1,2; 42/1ಎ ರಿಂದ 42/3ಹೆಚ್ 3ರವರೆಗೆ; 42/2 ರಿಂದ 42/11ರವರೆಗೆ; 43; 44; 45; 46/1,2; 47/1,2; 48; 49; 50; 51; 53; 54; 55/1,2; 56; 57; 58/1; 59; 60; 61; 62; 63; ಮತ್ತು 64 ರಲ್ಲಿನ ಒಟ್ಟು 172 ಎಕರೆ 24 ಗುಂಟೆ ಜಮೀನಿನಲ್ಲಿ ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರವು ರೂ. 65.00 ಕೋಟಿಗಳ ಅಂದಾಜು ವೆಚ್ಚದಲ್ಲಿ ವಸತಿ ಯೋಜನೆಯನ್ನು ಕೈಗೆತ್ತಿಕೊಳ್ಳಲು ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರ ಕಾಯ್ದೆ 1987ರ ಕಲಂ 18 (3) ರನ್ವಯ ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಟಿ ನಾರಾಯಣಸ್ವಾಮಿ**

ಪಿ.ಆರ್. 1896

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಸಿಆಸುಇ 72 ಶಿಸನೇ 2009, ಬೆಂಗಳೂರು, ದಿನಾಂಕ: 24ನೇ ಜುಲೈ 2009**

ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 72 ಶಿಸನೇ 2009, ದಿನಾಂಕ: 03.07.2009 ರಲ್ಲಿನ ವಿಷಯ, ಪ್ರಸ್ತಾವನೆ, ಹಾಗೂ ಆದೇಶ ವಿಭಾಗದಲ್ಲಿ ನಮೂದಿಸಿರುವ "3ನೇ ಹಣಕಾಸು ಆಯೋಗದ ವರದಿಯನ್ನು ಅನುಷ್ಠಾನಗೊಳಿಸಲು" ಎಂಬುದಕ್ಕೆ ಬದಲಾಗಿ "3ನೇ ಹಣಕಾಸು ಆಯೋಗವು ಪಂಚಾಯತ್ ರಾಜ್ ಸಂಸ್ಥೆಗಳು ಮತ್ತು ನಗರ ಸ್ಥಳೀಯ ಸಂಸ್ಥೆಗಳನ್ನು ಬಲಪಡಿಸಲು ನೀಡಿರುವ ಶಿಫಾರಸ್ಸುಗಳ ಅನುಷ್ಠಾನಕ್ಕಾಗಿ" ಎಂಬುದಾಗಿ ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ತಿಪ್ಪೇಸ್ವಾಮಿ**

ಪಿ.ಆರ್. 1902

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ರಾಜ್ಯ ಶಿಷ್ಟಾಚಾರ)